KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೧೨, ೨೦೦೯ (ಕಾರ್ತೀಕ ೨೧, ಶಕ ವರ್ಷ ೧೯೩೧) | ಸಂಚಿಕೆ ೪೫ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿಆಸ್ಕರ್ ರಸ್ತೆ, ಬೆಂಗಳೂರು–52**

**ಸಂಖ್ಯೆ:ಸಿಬ್ಬಂದಿ/02/ಇಸಿಎಸ್–1/2009–10, ದಿನಾಂಕ:14ನೇ ಅಕ್ಟೋಬರ್, 2009**

**ವಿಷಯ:** ಸಹಕಾರ ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕ ಹುದ್ದೆಗೆ ನೇಮಕಾತಿಯ ಕುರಿತು.

**ಉಲ್ಲೇಖ:**1) ಸರ್ಕಾರದ ಪತ್ರಗಳ ಸಂಖ್ಯೆ: ಸಇ/337/ಎಸಸೇ/2005, ದಿನಾಂಕ:02.01.2007 ಮತ್ತು ಸಂಖ್ಯೆ:ಸಇ/230/ಎಸಸೇ 2007, ದಿನಾಂಕ:29.06.2007.

2) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಕ್ರಮಾಂಕ:ಇ(2) 24–91/2009–10/ಪಿಎಸ್‌ಸಿ, ದಿನಾಂಕ;07.05.2009 ರೊಂದಿಗಿನ ಅಧಿಸೂಚನೆ ಸಂಖ್ಯೆ: ಇ(2)21/2009–10/ಪಿಎಸ್‌ಸಿ, 2009–10/ಪಿಎಸ್‌ಸಿ, ದಿನಾಂಕ:30.04.2009.

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಂದ ಉಲ್ಲೇಖ (2)ರ ಪತ್ರದನ್ವಯ ಸಹಕಾರ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ರೂ.7275–175–7800–200–8600–225–9500–250–10500–300–12300–350–13350ರ ವೇತನ ಶ್ರೇಣಿಯ ಹುದ್ದೆಗೆ ಆಯ್ಕೆಗೊಂಡಿರುವ ಈ ಕೆಳಕಂಡ ಅಭ್ಯರ್ಥಿಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವ ನಿಬಂಧನೆಗಳಿಗೆ ಒಳಪಟ್ಟು ತಾತ್ಕಾಲಿಕವಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಕಛೇರಿಗೆ ನೇಮಕಾತಿ ಮಾಡಿ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀಯುತರಾದ | ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿ |
|---|---|---|
| 1. | ಶಿಲ್ಪಾ ಡಿ.ಸಿ. ಬಿನ್ ಚನ್ನಪ್ಪ, #10/7, ಕಾಶಿವಿಶ್ವನಾಥ ದೇವಸ್ಥಾನದ ರಸ್ತೆ, ಕೊಳ್ಳೇಗಾಲ–571440. | ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ ಮೈಸೂರು ಪ್ರಾಂತ ಮೈಸೂರು, (ಖಾಲಿ ಹುದ್ದೆ) |
| 2. | ಬಿ. ನಾಗೇಶ್, ಬಿನ್ ಬಸವರಾಜಪ್ಪ, ಬಿಡಗಲು, ಸರ್ಜಾಪುರ ಅಂಚೆ, ಹೆಚ್.ಡಿ.ಕೋಟೆ ತಾ: ಮೈಸೂರು ಜಿಲ್ಲೆ–571444. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 3. | ಸುನೀಲ್ ಕುಮಾರ್ ಡಿ.ಬಿ. ಕೇರಾಫ್ ದಾಸೇಗೌಡ ಬಿ.ಟಿ., #ಸಿ2ಎ, ಎಸ್.ಆರ್.ಎಸ್. ಕಾಲೋನಿ, ಕೆಪಿಟಿಸಿಎಲ್ ಕ್ವಾರ್ಟಸ್, ಪೀಣ್ಯ, ಬೆಂಗಳೂರು–58. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀಯುತರಾದ | ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿ |
|---|---|---|
| 4. | ದಿನೇಶ್ ಕೆ.ಕೆ. ಬಿನ್ ಕಾಳೇಗೌಡ, ಕೆ.ಕೊಪ್ಪಲು, ಹುಲ್ಲಿಕೆರೆ ಅಂಚೆ, ಗಂಡಸಿ ಹೋಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 5. | ಮಂಜುನಾಥ ಬಿ.ಕೆ. ಬಿನ್ ಕೃಷ್ಣಮೂರ್ತಿ ಬಿ.ಆರ್. ಬೆಳಗೂರಿ ಅಂಚೆ, ಚಿಕ್ಕನಾಯಕನಹಳ್ಳಿ, ತುಮಕೂರು–572228. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 6. | ಮಹೇಶ್ ಕೆ. ಬಿನ್ ಕರಿಯಪ್ಪ ಕಸಪ್ಪನಹಳ್ಳಿ, ಗುಡ್ಡದನೇರಳಕೆರೆ ಅಂಚೆ, ಹೊಸದುರ್ಗ ತಾ: ಚಿತ್ರದುರ್ಗ ಜಿಲ್ಲೆ–577 533. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ–I, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು (ಖಾಲಿ ಹುದ್ದೆ) |
| 7. | ಮಂಜುನಾಥ ಪಾಟೀಲ್, ಸತ್ತಿಪೋಸ್ಟ್, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 8. | ಶಿವಕುಮಾರ ಎಂ.ವಿ. ಬಿನ್ ವೀರಭದ್ರೇಗೌಡ, ಎಂ.ಮನಿಯಂಬಾಲೆ ಗ್ರಾಮ, ಗುತ್ತಲಹುಣಸೇ ಅಂಚೆ, ಮರಳವಾಡಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ರಾಮನಗರ ಜಿಲ್ಲೆ, ರಾಮನಗರ (ಖಾಲಿ ಹುದ್ದೆ) |
| 9. | ಶಿವಶಂಕರ ಬಿ.ಆರ್. ಬಿನ್ ಎಂ.ರಾಮಚಂದ್ರಪ್ಪ, ಆಲಂಬಡಿ ಗ್ರಾಮ & ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ–563130. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ–II, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು (ಖಾಲಿ ಹುದ್ದೆ) |
| 10. | ಶಿವಪ್ಪ ಆರ್. ಹರುಗೊಪ್ಪ, ಕೇರಾಫ್ ಬಿ.ಜಿ. ಪಾಟೀಲ್, ಗಣೇಶ ಫರ್ನಿಚರ್, ಸಂಕೇಶ್ವರ ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 11. | ವೆಂಕಟಾಚಲಪತಿ ಜೆ.ಸಿ., ಬಿನ್ ಚಿಕ್ಕಗೋವಿಂದಪ್ಪ, ಜಯಮಂಗಲ ಗ್ರಾಮ, ಗೊಲ್ಲಹಳ್ಳಿ ಅಂಚೆ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ (ಖಾಲಿ ಹುದ್ದೆ) |
| 12. | ಪದ್ಮನಾಭ ಎಂ.ಪಿ., #3544, 2ನೇ ಕ್ರಾಸ್, 3ನೇ ತಿರುವು, ತಿಲಕ್‌ನಗರ, ಮೈಸೂರು–21 | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರ ಉಪವಿಭಾಗ ರಾಮನಗರ, (ಖಾಲಿ ಹುದ್ದೆ) |
| 13. | ಗಿರೀಶ್ ಬಿ. ಯಾವಗಲ್, ಕೇರಾಫ್ ಬಿ.ಬಿ. ಯಾವಗಲ್, ಹೆಚ್.ನಂ.2, ಎ.ಪಿ.ಎಂ.ಸಿ.ಕ್ವಾಟ್ರಸ್, ಮಾಳಾಪುರ, ಧಾರವಾಡ–580008. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಗದಗ ಉಪವಿಭಾಗ, ಗದಗ (ಖಾಲಿ ಹುದ್ದೆ) |
| 14. | ವೆಂಕಟೇಶ್ ವೈ.ಪಿ. ಕೇರಾಫ್ ಕೃಷ್ಣೇಗೌಡ, #1257, 5ನೇ ಬಿ ಮೈನ್ ರೋಡ್, 1ನೇ ಬ್ಲಾಕ್, ಮಾನಸನಗರ, ನಾಗರಬಾವಿ, ಬೆಂಗಳೂರು–560072. | ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು (ಖಾಲಿ ಹುದ್ದೆ) |
| 15. | ಬಸವರಾಜ್ ವೈ. ಅಂಬಿಗೇರ್, ಗಂಗಾ ನಿವಾಸ, ಮಹಾವೀರ ರಸ್ತೆ, ಬಾಗಲಕೋಟೆ–587101. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿಕ್ಕೋಡಿ ಉಪವಿಭಾಗ, ಚಿಕ್ಕೋಡಿ (ಖಾಲಿ ಹುದ್ದೆ) |
| 16. | ಸುರೇಶ ಪಂಡಿತ್ ಪುಜಾರಿ, ಮು/ಪೋಸ್ಟ್, ನಗರಮುನ್ನೋಳಿ, ಚಿಕ್ಕೋಡಿ ತಾ: ಬೆಳಗಾಂ ಜಿಲ್ಲೆ–591222. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೆಳಗಾವಿ ಜಿಲ್ಲೆ, ಬೆಳಗಾವಿ (ಖಾಲಿ ಹುದ್ದೆ) |
| 17. | ಸಿದ್ದಲಿಂಗೇಶ್ ಕಮತಗಿ, ಕೇರಾಫ್ ಬಿ.ಟಿ. ತಿಮ್ಮಾಪುರ, ಶ್ರೀ ಸುಗುಣೇಶ ನಿಲಯ, ಮಾರುತಿ ನಗರ, ಮುದ್ದೇಬಿಹಾಳ ಅಂಚೆ, ಬಿಜಾಪುರ–586212. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಿಂಧನೂರು ಉಪವಿಭಾಗ, ಸಿಂಧನೂರು (ಖಾಲಿ ಹುದ್ದೆ) |

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀಯುತರಾದ | ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿ |
|---|---|---|
| 18. | ಸಚ್ಚಿದಾನಂದಮೂರ್ತಿ ಹೆಚ್.ಎ. #160, 4ನೇ ಮೈನ್, 4ನೇ ಕ್ರಾಸ್, ಬಿ.ಸಿ.ಸಿ.ಲೇಔಟ್, ಅತ್ತಿಗುಪ್ಪೆ, ವಿಜಯನಗರ, 2ನೇ ಸ್ಟೇಜ್, ಬೆಂಗಳೂರು–560 040. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 19. | ರಮೇಶ್ ಹೆಚ್. ಬಿನ್ ಹನುಮಂತಪ್ಪ, ಮಲ್ಲಶೆಟ್ಟಿ ಹಳ್ಳಿ, ಹೊನ್ನೂರು ಅಂಚೆ, ದಾವಣಗೆರೆ ತಾಲ್ಲೂಕು, ದಾವಣಗೆರೆ–577556 | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ (ಖಾಲಿ ಹುದ್ದೆ) |
| 20. | ಮಮತಾ ನಾಯಕ್, ಕೇರಾಫ್ ಮುನೇಶ್ವರ ಹೆಚ್. ನಾಯಕ್, ಭಾವಿಕೆರೆ ಅಂಚೆ, ಅಂಕೋಲ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ–581314. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ (ಖಾಲಿ ಹುದ್ದೆ) |
| 21. | ಮುತ್ತಪ್ಪ ಸತ್ಯಪ್ಪ ಗೌಡಪ್ಪನವರ್, ನಂದಿ ಫರ್ಟಿಲೈಸರ್ಸ್, ಕಾಲೇಜ್ ರಸ್ತೆ, ಬನಹಟ್ಟಿ ಅಂಚೆ, ಬಾಗಲಕೋಟೆ–587311. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿಕ್ಕೋಡಿ ಉಪವಿಭಾಗ, ಚಿಕ್ಕೋಡಿ, (ಖಾಲಿ ಹುದ್ದೆ) |
| 22. | ಗೀತಾ ಟಿ. ಬಿನ್ ಜಯಮ್ಮ ಆರ್.ಕೆ.ಇ.ಬಿ. ರಾಮಣ್ಣ ಮನೆ, ಹತ್ತಿರ, ಮುನ್ಸಿಪಾಲಿಟಿ ಆಫೀಸ್ ಹಿಂಭಾಗ, ವಿನಾಯಕ ಎಕ್ಸ್‌ಟೆನ್‌ಷನ್, ಹೊಸದುರ್ಗ. | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು (ಖಾಲಿ ಹುದ್ದೆ) |
| 23. | ಆಸೀಫ್ ಮುಶಪುರಿ, ಕೇರಾಫ್ ಎಂ.ಎಸ್. ನಾಯಕವಾಡಿ, ಹೌಸ್, ನಂ.9760/ಎ, ವೀರಭದ್ರನಗರ, 1ನೇ ಕ್ರಾಸ್, ಬೆಳಗಾಂ. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೈಲಹೊಂಗಲ ಉಪವಿಭಾಗ, ಬೈಲಹೊಂಗಲ (ಖಾಲಿ ಹುದ್ದೆ) |
| 24. | ಕಪಿಲ್ ಪಿ.ಕಾಂಬ್ಳೆ, ಐನಾಪುರ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೆಂಗಳೂರು, 2ನೇ ವೃತ್ತ, ಬೆಂಗಳೂರು (ಖಾಲಿ ಹುದ್ದೆ) |
| 25. | ಶಶಿಕಾಂತ ಕೆ.ಎಂ. ಕೇರಾಫ್ ಮಂಜಪ್ಪ ಕೆ.ಹೆಚ್. ಆರ್/ಒ ಶಾಲೆ ರಸ್ತೆ, ಕಾರೇಹಳ್ಳಿ (ಗ್ರಾ), ಬಾರಂದೂರು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿಕ್ಕಮಗಳೂರು ಉಪವಿಭಾಗ, ಚಿಕ್ಕಮಗಳೂರು (ಖಾಲಿ ಹುದ್ದೆ) |
| 26. | ರಮೇಶ ಬಿ. ಬಿನ್ ಬಸವಯ್ಯ ಹೆಚ್.ಆರ್. ಜಿ.ಹೊಸಹಳ್ಳಿ ಅಂಚೆ, ಗುಬ್ಬಿ ತಾಲ್ಲೂಕು, ತುಮಕೂರು. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 27. | ರಂಗಸ್ವಾಮಿ ಎಂ.ವಿ. ಬಿನ್ ಕೆ.ವೆಂಕಟರಮಣಶೆಟ್ಟಿ, #398, ಕೆಳಗಲಕೇರಿ, ಮೇಲುಕೋಟೆ, ಪಾಂಡವಪುರ ತಾಲ್ಲೂಕು, ಮಂಡ್ಯ–571431 | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 28. | ಮಂಜುಳ ಕೆ., ಬಿನ್ ಕೃಷ್ಣೇಗೌಡ, ಅಂಬಿಕಾಪುರ, ಮಂಚಾಪುರ ಅಂಚೆ, ಕೊಳ್ಳೇಗಾಲ ತಾ: ಚಾಮರಾಜನಗರ ಜಿಲ್ಲೆ. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ (ಖಾಲಿ ಹುದ್ದೆ) |
| 29. | ಮನುಮಂಜುಳ ಬಿ.ಹೆಚ್. ಬಿನ್ ಹುಚ್ಚೇಗೌಡ, ಬಿಂಡಿಗನವಿಲೆ ಅಂಚೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ–571802 | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಮೈಸೂರು ಜಿಲ್ಲೆ ಮೈಸೂರು (ಖಾಲಿ ಹುದ್ದೆ) |
| 30. | ಶಕು ಎಂ.ಸಿ. ಕೋಂ ರಘುಕುಮಾರ, ಬಸ್ತಿಹಳ್ಳಿ, ಹಳೆಬೀಡು ಅಂಚೆ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ. | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಹಾಸನ ಜಿಲ್ಲೆ, ಹಾಸನ. (ಖಾಲಿ ಹುದ್ದೆ) |

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀಯುತರಾದ | ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿ |
|---|---|---|
| 31. | ರಮ್ಯ ಕೆ. ಕೋಂ ಗಣೇಶ್ ಎಸ್., ಟೈಪಿಸ್ಟ್, ಜಿಲ್ಲಾ ಹಾಗೂ ಸತ್ರ ನ್ಯಾಯಾಲಯ, ಕೊಡಗು, ಮಡಿಕೇರಿ. | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಮಡಿಕೇರಿ ಜಿಲ್ಲೆ, ಮಡಿಕೇರಿ. (ಖಾಲಿ ಹುದ್ದೆ) |
| 32. | ಕೃಷ್ಣಕುಮಾರ್ ಕೆ.ಎಸ್., #89, 1ನೇ ಸ್ಟೇಜ್, ಗಿರಿಗೌಡ ರಸ್ತೆ, ಟೆಲಿಕಾಂ ಲೇಔಟ್, ಗಂಗೋತ್ರಿ, ಮೈಸೂರು. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇಲ್ಲಿಗೆ ಮೂಲದಾಖಲಾತಿಗಳೊಂದಿಗೆ ಹಾಜರಾಗುವುದು. |
| 33. | ನಾಗರಾಜು ಬಿ.ಎಸ್., ಬಿನ್ ಸೀನಪ್ಪ ದೊಡ್ಡ ದೊಂಬರ ಪಾಳ್ಯ ಹಳ್ಳಿ, ಡಿ.ಎನ್.ದೊಡ್ಡಿ ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ–563139. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ–I, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು (ಖಾಲಿ ಹುದ್ದೆ) |
| 34. | ವಸಂತ ಕೆ.ಎಂ.ಸಿ. ಬಿನ್ ಕೆ.ಎಂ.ಚನ್ನಪ್ಪ ಡೋರ್ ನಂ.125, 2ನೇ ಸ್ಟೇಜ್, 2ನೇ ಕ್ರಾಸ್, ವಿನೋಬನಗರ, ಶಿವಮೊಗ್ಗ–577 204. | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು (ಖಾಲಿ ಹುದ್ದೆ) |
| 35. | ಲೀಲಾವತಿ ಗೌಡ, ಕೇರಾಫ್ ಸಿದ್ದಾಪುರ ಪೊಲೀಸ್ ಸ್ಟೇಷನ್, ಸಿದ್ದಾಪುರ ಕಾರವಾರ, ಉತ್ತರ ಕನ್ನಡ ಜಿಲ್ಲೆ–581 355. | ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ (ಖಾಲಿ ಹುದ್ದೆ) |
| 36. | ಜಯಶ್ರೀ ಜಿ.ಸವದಿ, ಕೇರಾಫ್ ಎಂ.ಆರ್. ಅಥಣಿ, ಬಾಲು ಗಲಗಲಿ ಹೌಸ್, ವೆಂಕಟೇಶ್ವರ ಕಾಲೋನಿ, 3ನೇ ಕ್ರಾಸ್, ಹುನ್ನೂರ್ ತಾಲ್ಲೂಕು, ಜಮಖಂಡಿ, ಬಾಗಲಕೋಟೆ ಜಿಲ್ಲೆ. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬಾಗಲಕೋಟೆ ಉಪವಿಭಾಗ, ಬಾಗಲಕೋಟೆ (ಖಾಲಿ ಹುದ್ದೆ) |
| 37. | ರೂಪ ಬಿ.ಎಂ.<br>ಕೇರಾಫ್ ರಾಮಕೃಷ್ಣಯ್ಯ, ಶ್ರೀಕೃಷ್ಣನಿವಾಸ, #593, 25ನೇ ಮೈನ್, ಬಿಹೆಚ್ಇಎಲ್ ಹತ್ತಿರ, ಆಫೀಸರ್ಸ್ ಕಾಲೋನಿ, ನಂದಿನಿ ಲೇಔಟ್,<br>ಬೆಂಗಳೂರು–560 096 | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 38. | ಮಂಜುಳಾದೇವಿ ಕೇರಾಫ್ ಎಸ್.ಎ.ಬಾಬು, ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) & ಸಿ.ಜೆ.ಎಂ.ಕೋರ್ಟ್, ಚಾಮರಾಜನಗರ–571313. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ (ಲೇವಾದೇವಿ) ಮೈಸೂರು (ಖಾಲಿ ಹುದ್ದೆ) |
| 39. | ನಾಗಮಣಿ ಕೆ.ಎನ್., #218, 3ನೇ 'ಎ' ಕ್ರಾಸ್, 'ಎ' ಸೆಕ್ಟರ್, ಯಲಹಂಕ, ಉಪನಗರ, ಬೆಂಗಳೂರು. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ–II, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು (ಖಾಲಿ ಹುದ್ದೆ) |
| 40. | ಸುಮಿತ್ರಾ ಕುಮಾರಿ ಎನ್.ಎನ್., ನಂ.76, ಬಡಗಬೆಟ್ಟು ಹಳ್ಳಿ ಡೋರ್, ನಂ.5–2–23 ಬಿ1, ರಶ್ಮಿ, 2ನೇ ಕ್ರಾಸ್, ಶಾಂತಿನಗರ, ಉಡುಪಿ–576101 | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ (ಖಾಲಿ ಹುದ್ದೆ) |
| 41. | ಪರವೀನ್ ಡಿ. ನಾಯಿಕ್‌ವಾಡಿ, ಹೆಚ್.ನಂ.76, 4ನೇ ಅಡ್ಡರಸ್ತೆ, 2ನೇ ಮುಖ್ಯರಸ್ತೆ, ಸಿ.ಐ.ಟಿ.ಬಿ. ಕಾಲೋನಿ, ಸದಾಶಿವ ನಗರ, ಸಪ್ತಾಪುರ, ಧಾರವಾಡ–580007. | ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಳಗಾವಿ ಪ್ರಾಂತ, ಬೆಳಗಾವಿ (ಖಾಲಿ ಹುದ್ದೆ) |
| 42. | ವಾಸು ನಾಯ್ಡು ವಿ.ಆರ್. #7/ಜಿ. ನ್ಯೂ ಜಗ್ಗು ಕಾಂಪ್ಲೆಕ್ಸ್, ದ್ವಾರಕಾನಗರ, ಐ.ಎ.ಎಫ್. ಪೋಸ್ಟ್, ಯಲಹಂಕ, ಬೆಂಗಳೂರು–560063. | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 43. | ವಿರೂಪಾಕ್ಷ ಕೆ. ಚಿಕ್ಕಮಠ, ಕೇರಾಫ್ ಪಿ.ಕೆ.ಚಿಕ್ಕಮಠ, ಹೆಮ್ಮಾಡಿ ಕಾಂಪೌಂಡ್, ಸರಸ್ವತಿಪುರ, ರೆಡ್ಡಿ ಕಾಲೋನಿ, ನೀರಿನ ಟ್ಯಾಂಕ್ ಹತ್ತಿರ, ಧಾರವಾಡ. | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಧಾರವಾಡ ಉಪವಿಭಾಗ, ಧಾರವಾಡ (ಖಾಲಿ ಹುದ್ದೆ) |

ಮಹಿಳಾ ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆಯು ಭಾರತದ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ:4728/08, ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಸಂಖ್ಯೆ:12081/08, 12911/08 ಮತ್ತು 15006/08 ಈ ಪ್ರಕರಣಗಳಿಗೆ ಸಂಬಂಧಿಸಿದಂತೆ ಮಾನ್ಯ ನ್ಯಾಯ ಮಂಡಳಿ ಹಾಗೂ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ನೇಮಕಾತಿ ಹೊಂದಲು ಯಾವುದೇ ಅನರ್ಹತೆ ಹೊಂದಿಲ್ಲದೇ ಇರುವ ಬಗ್ಗೆ ಪೊಲೀಸ್ ಪರಿಶೀಲನಾ ವರದಿ ಹಾಗೂ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ಜಾತಿ/ ಸಿಂಧುತ್ವ ಪ್ರಮಾಣ ಪತ್ರವನ್ನು ಪಡೆಯಲಾಗಿದ್ದು, ಕ್ರ.ಸಂ.18, 23, 33 ಮತ್ತು 38ರ ಅಭ್ಯರ್ಥಿಗಳ ದಾಖಲಾತಿಗಳು ಬರಬೇಕಾಗಿದ್ದು, ಅವರುಗಳು ಸಹಕಾರ ಸಂಘಗಳ ನಿಬಂಧಕರಿಂದ ಪ್ರತ್ಯೇಕ ಆದೇಶ ಪಡೆದ ನಂತರವೇ ಸ್ಥಳನಿಯುಕ್ತಿಗೊಂಡ ಹುದ್ದೆಗಳಿಗೆ ಹಾಜರಾಗತಕ್ಕದ್ದು, ಒಂದು ವೇಳೆ ಪೊಲೀಸ್ ವರದಿಯಲ್ಲಿ ಅನರ್ಹತೆ ಹೊಂದಿದ್ದಲ್ಲಿ ಅಥವಾ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ.

ಅಭ್ಯರ್ಥಿಗಳು ಈ ನೇಮಕಾತಿ ಆದೇಶ ತಲುಪಿದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ನೇಮಕಾತಿ ರದ್ದಾಗುತ್ತದೆ.

**ಡಿ.ಎನ್. ನಾಯಕ್**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ: ಸಿಬ್ಬಂದಿ/ಇಸಿಎಸ್–1/02/2009–10, ದಿನಾಂಕ:14ನೇ ಅಕ್ಟೋಬರ್, 2009**

**ನೇಮಕಾತಿಯ ಷರತ್ತುಗಳು ಮತ್ತು ನಿಬಂಧನೆಗಳು**

1) ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಹಾಗೂ ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರಿ ಆದೇಶಗಳು/ ಹೊರಡಿಸಲ್ಪಡುವ ನಿಯಮಾವಳಿಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2) ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಯ ನಿಯಮ 1977 ರಲ್ಲಿನ ನಿಯಮಗಳಿಗೆ ಬದ್ಧರಾಗಿರುತ್ತಾರೆ.
3) ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ನೇಮಕಾತಿಯು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ನೀಡಿರುವ ಸಿಂಧುತ್ವ ಪ್ರಮಾಣ ಪತ್ರವನ್ನು ಹಾಜರುಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ. ಒಂದು ವೇಳೆ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ ಹಾಗೂ ಅವರ ಮೇಲೆ ನಿಯಮಾವಳಿಗಳ ಪ್ರಕಾರ ಕಠಿಣ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ.
4) ಅಭ್ಯರ್ಥಿಯು ಹುದ್ದೆಗೆ ಹಾಜರಾಗಲು ಯಾವುದೇ ರೀತಿಯ ಪ್ರಯಾಣಭತ್ಯೆ ನೀಡಲಾಗುವುದಿಲ್ಲ.
5) ಅಭ್ಯರ್ಥಿಯು ಹುದ್ದೆಗೆ ಹಾಜರಾಗುವ ಸಮಯದಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಈ ಕೆಳಕಾಣಿಸಿದ ನಮೂನೆಯಲ್ಲಿ ನಿಷ್ಠೆಯ ಪ್ರಮಾಣವನ್ನು ಮಾಡತಕ್ಕದ್ದು.
"ಶ್ರೀ: ಶ್ರೀಮತಿ: ಕುಮಾರಿ__________ ಎಂಬ ಹೆಸರಿನವನಾದ/ ಹೆಸರಿನವಳಾದ ನಾನು ಪ್ರಜ್ಞೆ, ಅರ್ಪಣೆ ಮನೋಭಾವ ಮತ್ತು ವಿಶ್ವಾಸದಿಂದ ಕೆಲಸ ಮಾಡುತ್ತೇನೆಂದೂ, ಭಾರತಕ್ಕೆ ಮತ್ತು ಭಾರತದ ಸಂವಿಧಾನಕ್ಕೆ ಸತ್ಯವಾಗಿ ನಿಷ್ಠನಾಗಿರುತ್ತೇನೆಂದೂ, ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯನ್ನು ಎತ್ತಿ ಹಿಡಿಯುತ್ತೇನೆಂದೂ ಮತ್ತು ನನ್ನ ಕರ್ತವ್ಯಗಳನ್ನು ನಿಷ್ಠೆಯಿಂದ ಪ್ರಾಮಾಣಿಕತೆಯಿಂದ ಮತ್ತು ನಿಷ್ಪಕ್ಷಪಾತವಾದ ರೀತಿಯಲ್ಲಿ ನಿರ್ವಹಿಸುತ್ತೇನೆಂದೂ, ಈ ಮೂಲಕ ಶಪಥ ಮಾಡುತ್ತೇನೆ. ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ. ಅದಕ್ಕೆ ಭಗವಂತನು ನನಗೆ ಸಹಾಯ ಮಾಡಲಿ".
6) ಅಭ್ಯರ್ಥಿಯನ್ನು ತಾತ್ಕಾಲಿಕವಾಗಿ ಪರಿವೀಕ್ಷಣೆಯ ಮೇಲೆ ನೇಮಕ ಮಾಡಿದೆ. ಇವರು ಹುದ್ದೆಗೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಅರ್ಹತಾ ಪರೀಕ್ಷಾವಧಿಯಲ್ಲಿರುತ್ತಾರೆ (ಪ್ರೊಬೇಷನ್) ಈ ಅವಧಿಯಲ್ಲಿ ಇವರು ಹುದ್ದೆಗೆ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು.
7) ಅರ್ಹತಾ ಪರೀಕ್ಷಾವಧಿಯಲ್ಲಿ ನೌಕರರ ಕರ್ತವ್ಯ ನಿರ್ವಹಣೆ, ಹಾಜರಾತಿ ಶಿಸ್ತು ಮತ್ತು ನಡತೆ ತೃಪ್ತಿಕರವಾಗಿರದೇ ಇದ್ದಲ್ಲಿ ಯಾವುದೇ ಮುನ್ಸೂಚನೆಯನ್ನು ನೀಡದೆ ನೇಮಕಾತಿಯನ್ನು ಕೊನೆಗೊಳಿಸಲಾಗುವುದು. ಅಭ್ಯರ್ಥಿಯು ತೃಪ್ತಿಕರವಾಗಿ ಕೆಲಸವನ್ನು ನಿರ್ವಹಿಸಿದ್ದಾರೆಂದು ಕಂಡು ಬಂದರೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ 2 ವರ್ಷಗಳ ಒಳಗಾಗಿ ಉತ್ತೀರ್ಣರಾದರೆ, ಅರ್ಹತಾ ಪರೀಕ್ಷಾವಧಿಯ ಮುಕ್ತಾಯದ ನಂತರ ಹಂಗಾಮಿಯ ನೇಮಕಾತಿಯನ್ನು ಖಾಯಂ ಮಾಡುವ ಬಗ್ಗೆ (ಅರ್ಹತಾ ಪರೀಕ್ಷಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುವ

ಬಗ್ಗೆ) ಪರಿಶೀಲಿಸಲಾಗುವುದು. ಅರ್ಹತಾ ಪರೀಕ್ಷಾವಧಿಯಲ್ಲಿ ಸೇವೆಯು ತೃಪ್ತಿಕರವಾಗಿಲ್ಲದಿದ್ದಲ್ಲಿ ಅರ್ಹತಾ ಪರೀಕ್ಷಾವಧಿಯು ಮುಗಿದ ನಂತರವೇ ಆಗಲೀ ಅದಕ್ಕೂ ಮೊದಲೇ ಆಗಲೀ ನೇಮಕಾತಿಯನ್ನು ಕೊನೆಗೊಳಿಸಲಾಗುವುದು.

8) ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವ ಮೊದಲು ತನ್ನ ವಯಸ್ಸು, ವಿದ್ಯಾರ್ಹತೆ, ಜಾತಿ ಇತ್ಯಾದಿಗಳ ಬಗ್ಗೆ ಮೂಲ ಪ್ರಮಾಣ ಪತ್ರಗಳನ್ನು ಹಾಜರುಪಡಿಸತಕ್ಕದ್ದು.

9) ಅಭ್ಯರ್ಥಿಯು ತನ್ನ ಆರೋಗ್ಯದ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಅಸಿಸ್ಟೆಂಟ್ ಸರ್ಜನ್ ಗ್ರೇಡ್–II ಅಥವಾ ಅದಕ್ಕೂ ಮೇಲ್ದರ್ಜೆಯ ವೈದ್ಯಾಧಿಕಾರಿಯಿಂದ ಪಡೆದು ಕರ್ತವ್ಯಕ್ಕೆ ಹಾಜರಾಗುವ ಮೊದಲು ವರದಿ ಮಾಡಿಕೊಳ್ಳುವ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

10) ಅಭ್ಯರ್ಥಿಯು ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

11) ಅಭ್ಯರ್ಥಿಯು ನೇಮಕಾತಿ ಕೋರಿ ಸಲ್ಲಿಸಿರುವ/ ಸಲ್ಲಿಸುವ ದಾಖಲೆಗಳಲ್ಲಿ ಯಾವುದಾದರೂ ಕೃತ್ರಿಮವೆಂದೂ, ಅಸತ್ಯವೆಂದೂ ಕಂಡುಬಂದಲ್ಲಿ ಮತ್ತು ಅಭ್ಯರ್ಥಿಯು ತಪ್ಪು ಮಾಹಿತಿಯನ್ನು ನೀಡಿದ್ದಾನೆಂದು, ನೇಮಕಾತಿಯ ನಂತರ ಯಾವುದೇ ಸಮಯದಲ್ಲಿ ಕಂಡುಬಂದಲ್ಲಿ ಯಾವುದೇ ಮುನ್ಸೂಚನೆ ನೀಡದೇ ಅಭ್ಯರ್ಥಿಯನ್ನು ಸೇವೆಯಿಂದ ತೆಗೆದುಹಾಕಲಾಗುವುದು ಜೊತೆಗೆ ದಂಡನೆಯ ಬಗ್ಗೆ ಕೂಡ ಕ್ರಮ ಕೈಗೊಳ್ಳಲಾಗುವುದು.

12) ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ (ಉದ್ಯೋಗ ವಿನಿಮಯ ಕೇಂದ್ರ), ಅಭ್ಯರ್ಥಿಗಳಿಗೆ ನೀಡಲಾಗಿರುವ ಗುರುತಿನ ಚೀಟಿಗಳನ್ನು ಕೆಲಸಕ್ಕೆ ಹಾಜರಾದಾಗ ಕಛೇರಿ ಮುಖ್ಯಸ್ಥರಿಗೆ ಹಿಂದಿರುಗಿಸತಕ್ಕದ್ದು ಹಾಗೂ ಉದ್ಯೋಗ ವಿನಿಮಯ ಕೇಂದ್ರದಿಂದ ಗುರುತಿನ ಚೀಟಿ ಪಡೆದಿಲ್ಲವಾದಲ್ಲಿ ಅಭ್ಯರ್ಥಿಯು ಈ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.

13) ಈ ಅಭ್ಯರ್ಥಿಯ ಜ್ಯೇಷ್ಠತೆಯು, ಕರ್ನಾಟಕ ಸರ್ಕಾರಿ ನೌಕರರ ಜ್ಯೇಷ್ಠತಾ ನಿಯಮ 1957ರ ನಿಯಮ 5(ಎ) ಮತ್ತು (ಬಿ) ರೀತ್ಯಾ ನಿರ್ಧಾರವಾಗುತ್ತದೆ.

14) ಅಭ್ಯರ್ಥಿಗಳಿಗೆ ಸಂಬಂಧಿಸದೇ ಇರುವ ಸ್ಥಳೀಯ ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಗುಣ ನಡತೆ ಪ್ರಮಾಣ ಪತ್ರಗಳನ್ನು ಹಾಗೂ ಇತ್ತೀಚಿಗಿನ ಭಾವಚಿತ್ರಗಳನ್ನು ಕರ್ತವ್ಯಕ್ಕೆ ಹಾಜರಾಗುವಾಗ ಸಲ್ಲಿಸತಕ್ಕದ್ದು.

**ಡಿ.ಎನ್. ನಾಯಕ್**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.1030

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿ ನಿಯಮ 441, ಇವರ ಕಛೇರಿ ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು–04**

**ಸಂ:ಸ.ಸಂ.ಸ.ನಿ./ವ.ಅ./ಕರಾಕೈವಾಸಬ್ಯಾನಿ/ಸ್ಥಿರೀಕರಣ/07ಸಿಇಪಿ2/2002–03/3288, ದಿನಾಂಕ:10ನೇ ಅಕ್ಟೋಬರ್, 2009**

**ವಿಷಯ:** ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ ಬೆಂಗಳೂರು–4, ಇದರ ಮಂಗಳೂರು ಶಾಖೆಯ ಅಮಲ್ಜಾರಿ ಸಂಖ್ಯೆ: ಸಿಇಪಿ ಸಂಖ್ಯೆ:02/2002–03 ದಿನಾಂಕ:18.04.2002ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ತೀರ್ಪು ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960, ನಿಯಮ 38(6) (ಎ)ರ ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ 1946/2000–01, ದಿನಾಂಕ:12.06.2001.

2) ಅಮಲ್ಜಾರಿ ಸಂಖ್ಯೆ: ಸಿಇಪಿ/02/2002–03 ದಿನಾಂಕ:18.04.2002.

3) ಮಾನ್ಯ ಸಿವಿಲ್ ನ್ಯಾಯಾಲಯ ಮಂಗಳೂರು ದಾವೆ ಸಂಖ್ಯೆ: ಒ.ಎಸ್.361/2005ರ ಆದೇಶ ದಿನಾಂಕ:11/02/2005.

4) ಮಾರಾಟಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಮಂಗಳೂರು ಶಾಖೆ, ಇವರ ವರದಿ ಸಂಖ್ಯೆ: ಕ.ರಾ.ಕೈ.ವಾ.ಸ.ಬ್ಯಾ.ನಿ. ಎಂ.ಎನ್.ಜಿ/ ದಿನಾಂಕ:21.11.2005ರಂತೆ.

5) ಈ ಕಛೇರಿ ಆದೇಶದ ದಿನಾಂಕ:25.04.2006.

6) ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಕಛೇರಿ, ಮೇಲ್ಮನವಿ ಆದೇಶ ಸಂಖ್ಯೆ: ಡಿಆರ್‌ಬಿ/6/01/2006–07, ದಿನಾಂಕ:13.08.2007.

7) ಮಾನ್ಯ ಕಾರ್ಯದರ್ಶಿಯವರು, ಸಹಕಾರ ಇಲಾಖೆ, ಇವರ ಕಛೇರಿ ಪುನರ್‌ವಿಮರ್ಶನಾ ಅರ್ಜಿ ಸಂಖ್ಯೆ: ಸಿಎಂಡಬ್ಲ್ಯೂ/117/ಸಿಎಪಿ/2007ರ ಆದೇಶ ದಿನಾಂಕ:27.12.2008.
8) ಈ ಕಛೇರಿ ಆದೇಶ ಸಂಖ್ಯೆ:18.02.2009.
9) ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಕಛೇರಿ, ಮೇಲ್ಮನವಿ ಆದೇಶ ಸಂಖ್ಯೆ: ಡಿ.ಆರ್.ಬಿ/ಅಪೀಲು/07/2008–09, ದಿನಾಖಕ:03.10.2009.

ಶ್ರೀ ನಜೀರ್ ಅಹಮದ್, ಪಾಲುದಾರರು, ಎನ್.ಹೆಚ್. ಟಿಂಬರ್ಸ್, ಬಾಲಿಕಾಶ್ರಮ ರಸ್ತೆ, ಕಂಕನಾಡಿ, ಮಂಗಳೂರು, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು–560004, ಇದರ ಮಂಗಳೂರು ಶಾಖೆಯಿಂದ ವ್ಯಾಪಾರ ಅಭಿವೃದ್ಧಿಗಾಗಿ ದುಡಿಯುವ ಬಂಡವಾಳವಾಗಿ ರೂ.5,00,000/–ಗಳನ್ನು ಸಾಲ ಪಡೆದಿದ್ದು, ಸದರಿ ಸಾಲವನ್ನು ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಮರು ಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರ ನ್ಯಾಯಾಲಯ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಾವಾ ಹೂಡಿದ್ದು, ದಾವಾ ಸಂಖ್ಯೆ:1946/2000–01 ದಿನಾಂಕ:12.06.2001 ರಂತೆ ದಾವಾ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ. ದಿನಾಂಕ:30.06.2001ಕ್ಕೆ ಸದರಿ ತೀರ್ಪು ಸಾಲಗಾರರಿಂದ ಡಿಕ್ರಿದಾರ ಬ್ಯಾಂಕಿಗೆ ವಸೂಲಿಗೆ ಬಾಕಿ ರೂ.7,24,737/– ಗಳಿದ್ದು, ತೀರ್ಪು ಸಾಲಗಾರರ ಷೆಡ್ಯೂಲ್ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿಗೆ ಒಳಪಡಿಸಿದ್ದರೂ ಸಹ ಹೆಚ್ಚಿನ ಬೆಲೆಗೆ ಮಾರಾಟವಾಗದ ಕಾರಣ ಸಾಲ ವಸೂಲಿಯಾಗದೇ ಬಾಕಿ ಉಳಿದಿರುತ್ತದೆ.

ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರು, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಈ ಪ್ರಾಧಿಕಾರದ ದಾವಾದೇಶಾನುಸಾರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ, ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಇವರು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 34(1)ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ ಬೆಂಗಳೂರು–4, ಇವರ ಕಛೇರಿಯಲ್ಲಿ ಅಮಲ್ಜಾರಿ ಸಂಖ್ಯೆ:02/2002–03 ದಿನಾಂಕ:18.04.2002ರಂತೆ ಅಮಲ್ಜಾರಿ ಕ್ರಮ ಕೈಗೊಳ್ಳಲು ದಾಖಲು ಮಾಡಿರುತ್ತಾರೆ. ಸದರಿ ಅಮಲ್ಜಾರಿ ಪ್ರಕರಣವನ್ನು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್, ನಿಯಮಿತ, ಮಂಗಳೂರು ಶಾಖೆ ಮಾರಾಟಾಧಿಕಾರಿಯವರಿಗೆ ಅಮಲ್ಜಾರಿ ಕ್ರಮಕ್ಕಾಗಿ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು, ಈ ಅಮಲ್ಜಾರಿ ಪ್ರಕರಣವನ್ನು ಕಾರ್ಯಗತಗೊಳಿಸಲು ತೀರ್ಪು ಸಾಲಗಾರರಾದ ಶ್ರೀ ನಜೀರ್ ಅಹಮದ್, ಪಾಲುದಾರರು, ಮೆ॥ ಎನ್.ಹೆಚ್. ಟಿಂಬರ್ಸ್, ಕಂಕನಾಡಿ, ಮಂಗಳೂರು ಇವರು ಡಿಕ್ರಿದಾರ ಬ್ಯಾಂಕಿಗೆ ಸಾಲದ ಭದ್ರತೆಗಾಗಿ ಆಧಾರ ಮಾಡಿದ್ದ ಸ್ಥಿರಾಸ್ತಿ ಸಂಖ್ಯೆ: ಆರ್.ಎಸ್.3/2ಬಿ, ಫ್ಲಾಟ್ ನಂ.1–ಡಿ ಲಿಟಲ್ ಫ್ಲವರ್ ಅಪಾರ್ಟ್‌ಮೆಂಟ್, ಬಾಲಿಕಾಶ್ರಮ ರಸ್ತೆ, ಕಂಕನಾಡಿ, ಮಂಗಳೂರು, ವಿಸ್ತೀರ್ಣ 1220 ಚದರ ಅಡಿ ಸ್ಥಿರಾಸ್ತಿಯನ್ನು ಅನೇಕ ದಿನಾಂಕಗಳಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು, ಅಂತಿಮವಾಗಿ ದಿನಾಂಕ:29.05.2003ರಂದು ಬಹಿರಂಗ ಹರಾಜಿಗೆ ಒಳಪಡಿಸಲಾಗಿ ಸದರಿ ಹರಾಜಿನಲ್ಲಿ ಮೂರು ಮಂದಿ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಡಿ.ರಾಮಪ್ಪ, ಬಿನ್ ಲೇಟ್ ಸುಬ್ರಾಯಪ್ಪ, ಎಂಬುವವರು ರೂ.5,40,000/– (ರೂಪಾಯಿ ಐದು ಲಕ್ಷ ನಲವತ್ತು ಸಾವಿರ ರೂಪಾಯಿಮಾತ್ರ) ಗಳಿಗೆ ಬಿಡ್ ಮಾಡಿ ಅತೀ ಹೆಚ್ಚಿನ ಬಿಡ್‌ದಾರರಾದ ಪ್ರಯುಕ್ತ ಬ್ಯಾಂಕಿನ ಮಾರಾಟಾಧಿಕಾರಿಯವರು ಹರಾಜಿನ ಬಿಡ್ಡನ್ನು ಶ್ರೀ ರಾಮಪ್ಪ ಬಿನ್ ಲೇಟ್ ಸುಬ್ರಾಯಪ್ಪ ಇವರ ಹೆಸರಿಗೆ ನಿಲ್ಲಿಸಿರುತ್ತಾರೆ.

ಸದರಿ ತೀರ್ಪು ಸಾಲಗಾರರಾದ ಶ್ರೀ ನಜೀರ್ ಅಹಮದ್, ಪಾಲುದಾರರು, ಮೆ॥ ಎನ್.ಹೆಚ್. ಟಿಂಬರ್ಸ್, ಕಂಕನಾಡಿ, ಮಂಗಳೂರು, ಇವರು ದಿನಾಂಕ:29.05.2003 ರಂದು ಜರುಗಿದ ಬಹಿರಂಗ ಹರಾಜು ಮಾರಾಟವನ್ನು ಪ್ರಶ್ನಿಸಿ ಮಾನ್ಯ ಸಿವಿಲ್ ನ್ಯಾಯಾಲಯ, ಮಂಗಳೂರು ಇವರ ಮುಂದೆ ಒ.ಎಸ್.ನಂ.361/2003 ದಿನಾಂಕ:31.05.2003ರಂತೆ ಮೊಕದ್ದಮೆ ಹೂಡಿ ಸದರಿ ಹರಾಜಿಗೆ ತಾತ್ಕಾಲಿಕ ತಡೆಯಾಜ್ಞೆಯಾಗಿದ್ದು, ಸದರಿ ತೀರ್ಪು ಸಾಲಗಾರರು ಹೂಡಿದ್ದ, ಮೊಕದ್ದಮೆಯು ಅಂತಿಮವಾಗಿ ದಿನಾಂಕ:11.02.2005ರ ಆದೇಶದಂತೆ ವಜಾ ಆಗಿರುತ್ತದೆ.

ಡಿಕ್ರಿದಾರ ಬ್ಯಾಂಕಿನ ಮಾರಾಟಾಧಿಕಾರಿಯವರು ತಮ್ಮ ಪತ್ರದ ದಿನಾಂಕ:21.11.2005ರ ಉಲ್ಲೇಖ (4) ರನ್ವಯ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ದಿನಾಂಕ:29.05.2003ರಂದು ಜರುಗಿದ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘ ಕಾಯಿದೆ ಕಾನೂನನ್ನು ಅನುಸರಿಸಿ ಹರಾಜು ಮೂಲಕ ಮಾರಾಟ ಮಾಡಿರುವ ಷೆಡ್ಯೂಲ್ ಸ್ಥಿರಾಸ್ತಿ ಮಾರಾಟವನ್ನು ಶ್ರೀ ಡಿ.ರಾಮಪ್ಪ, ಬಿನ್ ಲೇಟ್ ಸುಬ್ರಾಯಪ್ಪ ಇವರಿಗೆ ಸ್ಥಿರೀಕರಿಸಬೇಕೆಂದು ವರದಿ ಸಲ್ಲಿಸಿ ಕೋರಿರುತ್ತಾರೆ. ಸದರಿ ವರದಿಯನ್ನು ಉಲ್ಲೇಖ (5)ರ ಈ ಕಛೇರಿ ಆದೇಶದಂತೆ ದಿನಾಂಕ:29.05.2003 ರಂದು ನಡೆದ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಯನ್ನು ರದ್ದುಪಡಿಸಿ ಮರು ಹರಾಜು ಮಾಡಲು ಆದೇಶಿಸಿದೆ. ಸದರಿ ಬಿಡ್‌ದಾರರಾದ ಶ್ರೀ ಡಿ. ರಾಮಪ್ಪ ಬಿನ್ ಸುಬ್ರಾಯಪ್ಪ ಮೇಲಿನ ಉಲ್ಲೇಖ(5)ರ ಆದೇಶದ ದಿನಾಂಕ:25.04.2006ರ ಆದೇಶವನ್ನು ಪ್ರಶ್ನಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 106ರಂತೆ ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ,

ಬೆಂಗಳೂರು ಈ ಮೇಲ್ಮನವಿ ಪ್ರಾಧಿಕಾರದ ಮುಂದೆ, ಮೇಲ್ಮನವಿ ಅರ್ಜಿ ಸಂಖ್ಯೆ:ಡಿ.ಆರ್.ಬಿ/ಆರ್.ಅಪೀಲು/01/2006–07 ರಂತೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಪ್ರಾಧಿಕಾರವು ಉಲ್ಲೇಖ (6) ರಂತೆ ಮೇಲ್ಮನವಿಯನ್ನು ದಿನಾಂಕ:13.08.2007ರ ಆದೇಶದಂತೆ ಪುರಸ್ಕರಿಸಿ, ದಿನಾಂಕ:29.05.2003 ರಂದು ಜರುಗಿದ ಬಹಿರಂಗ ಹರಾಜಿನಲ್ಲಿ ಆದ ಮಾರಾಟವನ್ನು ಸ್ಥಿರೀಕರಣಗೊಳಿಸಲು ಆದೇಶಿಸಿರುತ್ತದೆ.

ಈ ಮೇಲಿನ ಆದೇಶವನ್ನು ಡಿಕ್ರಿದಾರರಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಇವರು, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 108 ರನ್ವಯ ಮಾನ್ಯ ಸರ್ಕಾರದ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಬೆಂಗಳೂರು–1 ಇವರ ಮುಂದೆ ಪುನರ್ ಪರಿಶೀಲನಾ ಅರ್ಜಿ ಸಂಖ್ಯೆ:ಸಿ.ಎಂ.ಡಬ್ಲ್ಯೂ/117/ಸಿ.ಎ.ಪಿ./2007ರನ್ವಯ ಸಲ್ಲಿಸಿರುತ್ತದೆ. ಉಲ್ಲೇಖ (7)ರಂತೆ ಸದರಿ ಪುನರ್ ಪರಿಶೀಲನಾ ಅರ್ಜಿಯು ದಿನಾಂಕ:27.12.2008ರ ಆದೇಶದಂತೆ ವಜಾಗೊಂಡಿದ್ದು, ಕೆಳ ಮೇಲ್ಮನವಿ ಪ್ರಾಧಿಕಾರ ಅಂದರೆ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ದಿನಾಂಕ:13.08.2007ರಂದು ನೀಡಿರುವ ಆದೇಶವನ್ನು ಎತ್ತಿ ಹಿಡಿದಿರುತ್ತದೆ. ಮತ್ತು ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 108 ರನ್ವಯ ಆದೇಶ ನೀಡಿ ದಿನಾಂಕ:29.05.2003 ರಂದು ನಡೆದ ಬಹಿರಂಗ ಹರಾಜಿನ ಮಾರಾಟವನ್ನು ಸ್ಥಿರೀಕರಿಸಲು ಆದೇಶಿಸಿದೆ. ಆದೇಶವನ್ನು ಜಾರಿಗೊಳಿಸುವ ಬದಲು ಮತ್ತೊಂದು ಆದೇಶ ದಿನಾಂಕ:18.02.2009ನ್ನು ವಸೂಲಾಧಿಕಾರಿಯವರು ಉಲ್ಲೇಖ (8) ರಂತೆ ಹೊರಡಿಸಿರುತ್ತಾರೆ. ವಸೂಲಾಧಿಕಾರಿಯವರು ಹೊರಡಿಸಿರುವ ಆದೇಶ ದಿನಾಂಕ;18.02.2009ವನ್ನು ಬಹಿರಂಗ ಹರಾಜಿನಲ್ಲಿ ಆಸ್ತಿಯನ್ನು ಖರೀದಿ ಮಾಡಿದ ಬಿಡ್ಡುದಾರರಾದ ಶ್ರೀ ಡಿ.ರಾಮಪ್ಪ ಇವರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 106 ರನ್ವಯ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಡಿ.ಆರ್.ಬಿ/6/ಅಪೀಲು/2008–09 ರಲ್ಲಿ ಮೇಲ್ಮನವಿ ಸಲ್ಲಿಸಿ ಪ್ರಶ್ನಿಸಿರುತ್ತಾರೆ. ಉಲ್ಲೇಖ (9) ರನ್ವಯ ಮೇಲ್ಮನವಿ ಪ್ರಾಧಿಕಾರವು ದಿನಾಂಕ:03.10.2009ರಂದು ಮೇಲೆ ವಿವರಿಸಿರುವ ಮೇಲ್ಮನವಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ದಿನಾಂಕ:29.05.2003ರಂದು ನಡೆದ ಬಹಿರಂಗ ಹರಾಜು ಮಾರಾಟವನ್ನು ಸ್ಥಿರೀಕರಿಸಲು ಆದೇಶಿಸಿದೆ. ಕಾರಣ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಂ.ಚನ್ನಭೈರಯ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಿ ಅಧಿಕಾರಿ ನಿಯಮ 441 ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್, ನಿಯಮಿತ, ಬೆಂಗಳೂರು–560004, ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ 2001, ದಿನಾಂಕ:21.11.2001ರಂತೆ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಮಲ್ಜಾರಿ ಸಂಖ್ಯೆ: ಸಿಇಪಿ 02/2002–03 ದಿನಾಂಕ:18.04.2002 ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಶ್ರೀ ನಜೀರ್ ಅಹಮದ್, ಪಾಲುದಾರರು, ಮೆ॥ ಎನ್.ಹೆಚ್. ಟಿಂಬರ್ಸ್, ಕಂಕನಾಡಿ, ಮಂಗಳೂರು ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:29.05.2003ರಂದು ಡಿಕ್ರಿದಾರ ಬ್ಯಾಂಕಿನ ಮಾರಾಟ ಅಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಡಿ. ರಾಮಪ್ಪ ಬಿನ್ ಲೇಟ್ ಸುಬ್ರಾಯಪ್ಪ ಕೇರ್ ಆಫ್ ಡಾ॥ವಿಜಯ (ಮಗಳು) ಬಿ–12, ಸೀತಾಡಲ್ ಕದ್ರಿ ಟೆಂಪಲ್ ರಸ್ತೆ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಅವರು ಅತೀ ಹೆಚ್ಚಿನ ಬಿಡ್‌ದಾರರಾಗಿದ್ದು, ಇವರಿಗೆ ರೂ.5,40,000/– (ರೂ.ಐದು ಲಕ್ಷದ ನಲವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಭಾಗಶಃ ಸಾಲ ವಸೂಲಿಗೆ ಖಾಯಂಗೊಳಿಸಿ ಸ್ಥಿರೀಕರಿಸಲಾಗಿದೆ.

ತೀರ್ಮ ಸಾಲಗಾರರಾದ ಶ್ರೀ ನಜೀರ್ ಅಹಮದ್ ಇವರು, ಬಹಿರಂಗ ಹರಾಜು ಖರೀದಿದಾರರಾದ ಶ್ರೀ ಡಿ.ರಾಮಪ್ಪ, ಇವರಿಗೆ ಕೂಡಲೇ ಷೆಡ್ಯೂಲ್ ಆಸ್ತಿಯನ್ನು ಸ್ವಾಧೀನಕ್ಕೆ ಒಪ್ಪಿಸಲು ಆದೇಶಿಸಿದೆ.

**ಸ್ಥಿರಾಸ್ತಿಯ ವಿವರ**

ಆರ್.ಎಸ್.ನಂ.3/2ಬಿ ಪ್ಲಾಟ್ ನಂ.1 ಡಿ.ಲಿಟಲ್ ಫ್ಲವರ್ ಅಪಾರ್ಟ್‌ಮೆಂಟ್, ಬಾಲಿಕಾಶ್ರಮ ರಸ್ತೆ, ಕಂಕನಾಡಿ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ, ವಿಸ್ತೀರ್ಣ 1220 ಚದರ ಅಡಿ.

ಮಾರಾಟದ ಮೊಬಲಗು: ರೂ.5,40,000–00 (ಐದು ಲಕ್ಷ ನಲವತ್ತು ಸಾವಿರ ರೂಪಾಯಿಗಳು ಮಾತ್ರ)

ಮಾರಾಟದ ದಿನಾಂಕ: 29.05.2003

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:10.10.2009ರಂದು ನೀಡಲಾಗಿದೆ.

**ಎಂ. ಚನ್ನಭೈರಯ್ಯ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿ, ನಿಯಮ 441
ಕರ್ನಾಟಕ ರಾಜ್ಯ ಕೈಗಾರಿಕ ವಾಣಿಜ್ಯ ಸಹಕಾರ
ಬ್ಯಾಂಕ್ ನಿಯಮಿತ, ಬೆಂಗಳೂರು–04.

ಪಿ.ಆರ್.1043

**IN THE HIGH COURT OF KARNATAKA AT BANGALORE**
**(ORIGINAL JURISDICTION)**
**EP.NO.8/08**

**BETWEEN:**

1. Sri Kyatsandra N. Rajanna,
S/o Late Nanjappa, Aged about 57 years,
Ex. MLA and President of DCC Bank, Tumkur,
R/a "Rajatadri", Kyatsandra, Tumkur Taluk and District.

……. PETITIONER

**AND**

1. Sri D.C. Gowri Shankar, S/o Sri C.Chennigappa,
Aged about 30 years, R/a Byranayakanahalli,
Tyamagondlu Hobli,
Nelamangala Taluk,
Bangalore Rural District.

……..RESPONDENT

**Memorandum of Interlocutory Application filed under Section 151 of CPC read with Section 109 of the Representation of People Act 1951**

Advocate for petitioner has filed IA 1/08 in the above Election Petition praying to permit the petitioner to withdraw the above said Election Petition, on the ground that the Respondent has resigned as MLA from the Madhugiri Assembly Constituency on 18.08.2008 and the said resignation has been accepted and consequently the concerned authority declared the Seat as, "Vacant'.

The Petitioner further stated in his affidavit that "I am not interested in pursuing the Election Petition". Therefore the Petitioner Prays the Hon'ble Court to permit him to withdraw the Election Petition.

Place: Bangalore BY ORDER OF THE COURT
Date:22.10.2009 REGISTRAR JUDICIAL
PR-1066

**PROCEEDINGS OF THE ASST. REGISTRAR OF CO-OPERATIVE SOCIETIES II CIRCLE, MALLESWARAM, BANGALORE-560003**

**SUBJECT:** Regarding sale confirmation of immovable property of Sri K. Mohan Kumar, No.296, 74th Cross, Kumar swamy Layout, 1st Stage, Bangalore-78. Relating to C.E.P.No. CEP/ARB/II/(45)/6642/04-05 In favour of Sri K.M. Manjunatha S/o Manche Gowda & Smt. M. Mangala W/o Sri K.M. Manjunatha, No.510, 78th Cross, Kumarswamy Layout, 1St Stage, Bangalore-78.

**REFERENCE:**ARBII/CONFIRMATION/ ಆಸ್ತಿ/58/2009–10/Dated:15.10.2009 and Sale proceedings Date:26.08.2009 of the Sale officer of The Bangalore City Co-operative Bank Ltd., Bangalore. (ARCS 2nd Circle, Malleshwaram, Bangalore-03.

**PREAMBLE:**

Sri K. Mohan Kumar, Residing at No.67, 1st Floor, 12th Cross, BSK 1st Stage, Gangamma Temple Street, Ashoka nagar, Bangalore-50. Have borrowed loan form The Bangalore City Co-operative Bank Ltd., Padmanabhanagar Branch, Bangalore, by the Judgement debtor Sri K. Mohan Kumar have failed to repay the loan amount to the petitioner bank in time, consequent of which a decree bearing award No.JRB/DIS/7333/02-03 Dated:28.02.2004 for Rs.6,30,852/- as on 28.02.2004 plus further interest at the rate of 16% and Over due interest at the rate of 2% and other cost obtained against Sri K. Mohan Kumar.

In this connection execution petition was filed for execution of decree against the immovable property mortgaged by Sri K.Mohan Kumar No.296, 74th Cross, Kumarswamy Layout, 1st Stage, Bangalore-78, was brought for sale and public auction on 26.08.2009 by the sale officer Attached to The Bangalore City Co-operative Bank Pampamahakavi Road, Bangalore-18 and immovable property was sold in public auction for Rs.20,40,000/- in favour of Sri K.M. Manjunatha, S/o Manche Gowda & Smt. M. Mangala W/o Sri K.M. Manjunatha No.510, 78th Cross, Kumarswamy Layout, 1st Stage, Bangalore-78, Since he was the highest bidder in the public auction conducted on 26.08.2009.

From the perusal of the records of the sale officer attached to The Bangalore City Co-op Bank Ltd., Pampamahakavi Road, Bangalore-18 submitted to this office, it is seen that the sale officer followed the sale procedure laid under rule 38(2) (d) of Karnataka Co-op Societies rules 1960. In view of the proceedings of the sale officer after verifying and going through the records the following order is therefore passed.

**ORDER**

In exercise of powers vested under rule 38(6) (a) of the Karnataka Co-op. Societies rules 1960 the sale of the mortgage property bearing No.296, 74th Cross, Kumar swamy Layout, 1st Stage, Bangalore-78. By the Sale Officer attached to The Bangalore City Co-op Bank Ltd., Pampamahakavi Road, Bangalore-18 In public auction conducted on 26.08.2009 of the property detailed in the schedule.

**SCHEDULE OF THE PROPERTY**

Property bearing No.296, 74th Cross, Kumar swamy Layout, 1st Stage, Bangalore-78.

**BOUNDARIES**

East by – EWS House No.295,

West by – Road,

North by- Road,

South by-Drainage.

Measuring East-West 6.90+7.10 Mtrs. North-South 9.10 Mtrs.

2

In execution of CEP/ARB/II/(45)/6642/04-05 the above said property is therefore confirmed in favour of Sri K.M. Manjunatha S/o Manche Gowda & Smt. M. Mangala W/o Sri K.M. Manjunatha No.510, 78th Cross, Kumarswamy Layout, 1st Stage, Bangalore-78 for Rs.20,40,000/- (Rs.Twenty Lakh Forty Thousand Only) since he was the highest bidder in the auction sale conducted on 26.08.2009.

Given under hand and seal on this Date:15.10.2009.

Asst. Registrar of Co-operative Societies, II Circle,
Malleswaram, Bangalore-560003.

PR-1068

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಕೃಮಾಇ/26/ಚುನಾವ/2005, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11ರ ಉಪಪ್ರಕರಣ (1)(viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/26/ಚುನಾವ/2005, ದಿನಾಂಕ:07.01.2006ರಲ್ಲಿ ಶ್ರೀನಿವಾಸಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಾಡಿದ್ದ ಇಲಾಖಾ ಪ್ರತಿನಿಧಿ ನಾಮನಿರ್ದೇಶನವನ್ನು ರದ್ದುಗೊಳಿಸುತ್ತಾ, ಮೇಲ್ಕಂಡ ಕಾಯ್ದೆಯ ಕಲಂ 11(1)(viii)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಜಿ. ರಾಮಚಂದ್ರ ಆದ ನಾನು, ಶ್ರೀನಿವಾಸಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ಪ್ರತಿನಿಧಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಕೋಲಾರ | ಶ್ರೀನಿವಾಸಪುರ | ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಚಿಂತಾಮಣಿ. |

**ಜಿ. ರಾಮಚಂದ್ರ**
ನಿರ್ದೇಶಕರು.

ಪಿ.ಆರ್.1053

**ಕರ್ನಾಟಕ ಲೋಕಸೇವಾ ಆಯೋಗ**
**"ಉದ್ಯೋಗ ಸೌಧ", ಬೆಂಗಳೂರು–01**
**ಅಧಿಸೂಚನೆ**

**ಸಂಖ್ಯೆ: ಇ(1) 7991/2009–10/ಪಿಎಸ್‌ಸಿ, ದಿನಾಂಕ:21ನೇ ಅಕ್ಟೋಬರ್, 2009**

**ವಿಷಯ:** 2007–08ನೇ ಸಾಲಿನ 629 ಹುದ್ದೆಗಳ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಪರೀಕ್ಷೆಯಲ್ಲಿ ಪರೀಕ್ಷಾ ದುರಾಚಾರವೆಸಗಿದ ಶ್ರೀ ಕೆ.ಎಸ್. ನಾಗಭೂಷಣ್, (ನೋಂ.ಸಂ.20596) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1) ಶ್ರೀ ಕೆ.ಎಸ್. ನಾಗಭೂಷಣ್, ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ಸಲ್ಲಿಸಿದ್ದ ಅರ್ಜಿ.
2) ಶ್ರೀ ಕೆ.ಎಸ್. ನಾಗಭೂಷಣ್, ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ನಡೆಸಲಾದ ಮುಖ್ಯಪರೀಕ್ಷೆಯ ಕನ್ನಡ ವಿಷಯದ ಪತ್ರಿಕೆ–1ರ ಉತ್ತರ ಪತ್ರಿಕೆ.
3) ಶ್ರೀ ಕೆ.ಎಸ್. ನಾಗಭೂಷಣ್, ಇವರಿಗೆ ಜಾರಿಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ:ಇ(3)3058/2009–10/ಪಿಎಸ್‌ಸಿ, ದಿನಾಂಕ:17.08.2009.
4) ಶ್ರೀ ಕೆ.ಎಸ್. ನಾಗಭೂಷಣ್, ಇವರು ದಿನಾಂಕ:19.09.2009ರಂದು ಸಲ್ಲಿಸಿರುವ ಸಮಜಾಯಿಷಿ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ 1ರನ್ವಯ ಶ್ರೀ ಕೆ.ಎಸ್. ನಾಗಭೂಷಣ್, ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ:20596ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಇವರು ಐಚ್ಛಿಕ ವಿಷಯವಾದ ಕನ್ನಡ ಪತ್ರಿಕೆ–1ರ (Sub code-28) ಉತ್ತರ ಪತ್ರಿಕೆಯಲ್ಲಿ ನಿರ್ದಿಷ್ಟ ಉತ್ತರಗಳನ್ನು ಹೊರತುಪಡಿಸಿ ಮೌಲ್ಯಮಾಪಕರನ್ನು ಉದ್ದೇಶಿಸಿ ಹಣದ ಆಮಿಷ ನೀಡಿ ಹೆಚ್ಚು ಅಂಕಗಳನ್ನು ನೀಡುವಂತೆ ಕೋರಿ ಮನವಿಯನ್ನು ಬರೆದಿರುತ್ತಾರೆ. ಆಯೋಗವು ನೀಡಿರುವ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ್ದರಿಂದ ಮೇಲೆ ಓದಲಾದ (3)ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ಅಭ್ಯರ್ಥಿಯು ಮೇಲೆ ಓದಲಾದ (4)ರಲ್ಲಿನ ಹೇಳಿಕೆಯಲ್ಲಿ ಮನೋವ್ಯಾಕುಲತೆ ಮತ್ತು ಬುದ್ಧಿ ಭ್ರಮಣೆಯಿಂದ ಈ ರೀತಿ ಬರೆದಿರುವುದಾಗಿ ಆರೋಪವನ್ನು ಒಪ್ಪಿಕೊಂಡಿದ್ದು, ತನ್ನ ತಪ್ಪನ್ನು ಮನ್ನಿಸಿ ತನ್ನ ಫಲಿತಾಂಶವನ್ನು ಪ್ರಕಟಿಸುವಂತೆ ಕೋರಿರುತ್ತಾರೆ.

ಸದರಿ ಅಭ್ಯರ್ಥಿಯು ಸಲ್ಲಿಸಿದ್ದ ತಪ್ಪೊಪ್ಪಿಗೆ ಹೇಳಿಕೆಯನ್ನು ಅಧ್ಯಕ್ಷರ ಮುಂದೆ ಮಂಡಿಸಿದ್ದು, ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ತೀರ್ಮಾನಿಸಲಾಗಿದೆ.

**ಆದೇಶ ಸಂಖ್ಯೆ: ಇ(1) 7990/09–10/ಪಿಎಸ್‌ಸಿ, ಬೆಂಗಳೂರು, ದಿನಾಂಕ:21ನೇ ಅಕ್ಟೋಬರ್, 2009**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ, ದಿನಾಂಕ:14.07.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಕೆ.ಎಸ್. ನಾಗಭೂಷಣ್, (ನೋಂದಣಿ ಸಂಖ್ಯೆ:20596) ನಂ.140/ಎ, 4ನೇ ಮುಖ್ಯ ರಸ್ತೆ, 9ನೇ ಅಡ್ಡರಸ್ತೆ, ಬಾಪೂಜಿ ನಗರ, ಮೈಸೂರು ರಸ್ತೆ, ಬೆಂಗಳೂರು ಇವರಿಗೆ 2007–08ನೇ ಸಾಲಿನ 629 ಹುದ್ದೆಗಳ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಅಧ್ಯಕ್ಷರ ಆದೇಶದ ಮೇರೆಗೆ,
**ವಿ.ಬಿ. ಪಾಟೀಲ್,**
ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.1073

**ಕರ್ನಾಟಕ ಲೋಕಸೇವಾ ಆಯೋಗ**
**"ಉದ್ಯೋಗ ಸೌಧ", ಬೆಂಗಳೂರು–01**
**ಅಧಿಸೂಚನೆ**

**ಸಂಖ್ಯೆ: ಇ(1) 7989/2009–10/ಪಿಎಸ್‌ಸಿ, ದಿನಾಂಕ:21ನೇ ಅಕ್ಟೋಬರ್, 2009**

**ವಿಷಯ:** 2007–08ನೇ ಸಾಲಿನ 629 ಹುದ್ದೆಗಳ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಪರೀಕ್ಷೆಯಲ್ಲಿ ಪರೀಕ್ಷಾ ದುರಾಚಾರವೆಸಗಿದ ಶ್ರೀ ಚಂದ್ರಪ್ಪ ಸಿ., (ನೋಂ.ಸಂ.18236) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1) ಶ್ರೀ ಚಂದ್ರಪ್ಪ ಸಿ. ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ಸಲ್ಲಿಸಿದ್ದ ಅರ್ಜಿ.
2) ಶ್ರೀ ಚಂದ್ರಪ್ಪ ಸಿ. ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ನಡೆಸಲಾದ ಮುಖ್ಯಪರೀಕ್ಷೆಯ ಕನ್ನಡ ವಿಷಯದ ಪತ್ರಿಕೆ–1ರ ಉತ್ತರ ಪತ್ರಿಕೆ.
3) ಶ್ರೀ ಚಂದ್ರಪ್ಪ ಸಿ. ಇವರಿಗೆ ಜಾರಿಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ:ಎಲ್‌ಸಿ 1226/09/ಪಿಎಸ್‌ಸಿ, ದಿನಾಂಕ:13.08.2009.
4) ಶ್ರೀ ಚಂದ್ರಪ್ಪ ಸಿ. ಇವರು ದಿನಾಂಕ:21.08.2009ರಂದು ಸಲ್ಲಿಸಿರುವ ಸಮಜಾಯಿಷಿ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ 1ರನ್ವಯ ಶ್ರೀ ಚಂದ್ರಪ್ಪ ಸಿ. ಇವರು 2007–08ನೇ ಸಾಲಿನ 629 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹುದ್ದೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ:18236ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಇವರು ಐಚ್ಛಿಕ ವಿಷಯವಾದ ಕನ್ನಡ ಪತ್ರಿಕೆ–1ರ (Sub code-28) ಉತ್ತರ ಪತ್ರಿಕೆಯಲ್ಲಿ ನಿರ್ದಿಷ್ಟ ಉತ್ತರಗಳನ್ನು ಹೊರತುಪಡಿಸಿ ಮೌಲ್ಯಮಾಪಕರಿಗೆ ಮನವಿಯನ್ನು ಬರೆದಿರುವ ಹಿನ್ನೆಲೆಯಲ್ಲಿ ಆಯೋಗವು ನೀಡಿರುವ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ್ದರಿಂದ ಮೇಲೆ ಓದಲಾದ (3) ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ಅಭ್ಯರ್ಥಿಯು ಮೇಲೆ ಓದಲಾದ (4)ರಲ್ಲಿನ ಹೇಳಿಕೆಯಲ್ಲಿ ಮೇಲ್ವಿಚಾರಕರ ವರ್ತನೆಗೆ ನೊಂದು ಈ ರೀತಿ ಬರೆದಿರುವುದಾಗಿ ಆರೋಪವನ್ನು ಒಪ್ಪಿಕೊಂಡಿದ್ದು, ತನ್ನ ತಪ್ಪನ್ನು ಮನ್ನಿಸಿ ತನಗೆ ತಿಳುವಳಿಕೆ ನೀಡಿ ಯಾವುದೇ ದಂಡನೆಯನ್ನು ಸಹ ವಿಧಿಸದೆ ಕ್ಷಮೆ ನೀಡಬೇಕೆಂದು ಕೋರಿರುತ್ತಾರೆ.

ಸದರಿ ಅಭ್ಯರ್ಥಿಯು ಸಲ್ಲಿಸಿದ್ದ ತಪ್ಪೊಪ್ಪಿಗೆ ಹೇಳಿಕೆಯನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಇ(1) 7988/2009–10/ಪಿಎಸ್‌ಸಿ, ಬೆಂಗಳೂರು, ದಿನಾಂಕ:21ನೇ ಅಕ್ಟೋಬರ್, 2009**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ, ದಿನಾಂಕ:14.07.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಚಂದ್ರಪ್ಪ ಸಿ. (ನೋಂದಣಿ ಸಂಖ್ಯೆ:18236) ಬಿನ್ ಚನ್ನಯ್ಯ, ಚಿಕ್ಕೇನಹಳ್ಳಿ, ನಾಗವಾರ ಅಂಚೆ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ, ಇವರಿಗೆ 2007–08ನೇ ಸಾಲಿನ 629 ಹುದ್ದೆಗಳ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್.1074

**ವಿ.ಬಿ. ಪಾಟೀಲ್,**

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ:ಆಸಾನಿ 16/ಆಡಳಿತ–2/1317–29/2005, ಬೆಂಗಳೂರು, ದಿನಾಂಕ:20/24ನೇ ಅಕ್ಟೋಬರ್, 2009**

**ವಿಷಯ:** ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ, ಗಣತಿದಾರರು, ತಾಲ್ಲೂಕು ಕಛೇರಿ, ಬೈಲಹೊಂಗಲ, (ನಿಯೋಜನೆ ಮೇಲೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ ಇವರನ್ನು ಸರ್ಕಾರದ ಕೆಲಸದಿಂದ ತೆಗೆದುಹಾಕುವ ಕುರಿತು.

**ಉಲ್ಲೇಖ:** 1) ಈ ನಿರ್ದೇಶನಾಲಯದ ಆದೇಶ ಸಂಖ್ಯೆ:ಆಡಳಿತ:506:2005–06, ದಿನಾಂಕ:11.11.2005.
2) ಈ ನಿರ್ದೇಶನಾಲಯದ ಪತ್ರ ಸಂಖ್ಯೆ: ಆಸಾನಿ:16:ಆಡಳಿತ–2:2005:16311–12 ದಿನಾಂಕ:0508.2009.
3) ಸರ್ಕಾರದ ಪತ್ರ ಸಂಖ್ಯೆ: ಪಿಡಿ:209:ಎಸ್‌ಎಂಸಿ:2009 ದಿನಾಂಕ:06.10.2009.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿನ ಈ ನಿರ್ದೇಶನಾಲಯದ ಆದೇಶದ ದಿನಾಂಕ:11.11.2005ರನ್ವಯ ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ ಇವರು ಗಣತಿದಾರರಾಗಿ ಅನುಕಂಪ ಆಧಾರದ ಮೇಲೆ ನೇಮಕಾತಿಗೊಂಡು ದಿನಾಂಕ:23.11.2005 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿಯವರ ನೇಮಕಾತಿಯು ಕರ್ನಾಟಕ ನಾಗರೀಕ ಸೇವೆಗಳು (ಅನುಕಂಪ ಆಧಾರ ನೇಮಕಾತಿ) ನಿಯಮಗಳು, 1996ರ ನಿಯಮಾವಳಿಗಳನ್ವಯ ತಾತ್ಕಾಲಿಕ ನೇಮಕಾತಿ ಆಗಿದ್ದು, ಎರಡು ವರ್ಷಗಳ ಖಾಯಂಪೂರ್ವ ಪರೀಕ್ಷಾ ಅವಧಿಯಾಗಿರುತ್ತದೆ. ಈ ಎರಡು ವರ್ಷಗಳ ಖಾಯಂಪೂರ್ವ ಅರ್ಹತಾ ಪರೀಕ್ಷಾವಧಿಯಲ್ಲಿ ಇವರು ನಿಗದಿತ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೇ ಇದ್ದುದರಿಂದ ದಿನಾಂಕ:22.11.2008ರ ವರೆಗೆ ಒಂದು ವರ್ಷ ಅವಧಿಗೆ ಖಾಯಂಪೂರ್ವ ಅರ್ಹತಾ ಪರೀಕ್ಷಾವಧಿ ವಿಸ್ತರಿಸಲಾಗಿತ್ತು.

ಶ್ರೀ ಮಹೇಶ್‌ಕುಮಾರ್ ಬಿ.ಹೊರಟ್ಟಿ, ಗಣತಿದಾರರು ಇವರ ಸೇವಾ ದಾಖಲೆಗಳನ್ನು ಪರಿಶೀಲಿಸಲಾಗಿ ಇವರ ಸೇವೆಯು ಸಂಪೂರ್ಣವಾಗಿ ಅತೃಪ್ತಿಕರವಾಗಿರುವುದು ಕಂಡುಬರುತ್ತದೆ, ದಿನಾಂಕ:23.11.2005ರಂದು ತಾಲ್ಲೂಕು ಕಛೇರಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಮೇಲಿಂದ ಮೇಲೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗುತ್ತಿದ್ದ ಕಾರಣ, ಇವರನ್ನು ದಿನಾಂಕ:07.12.2006ರ ಆದೇಶದ ಮೂಲಕ ನಿಲಂಬನೆಯಲ್ಲಿರಿಸಲಾಗಿತ್ತು. ನಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಶಿಫಾರಸ್ಸಿನನ್ವಯ ಇವರ ನಿಲಂಬನೆ ಆದೇಶವನ್ನು ರದ್ದುಪಡಿಸಿ, ತಾಲ್ಲೂಕು ಕಛೇರಿ, ಬೈಲಹೊಂಗಲ, ಬೆಳಗಾವಿ ಜಿಲ್ಲೆ ಇಲ್ಲಿಗೆ ದಿನಾಂಕ:08.02.2007ರ ನಿರ್ದೇಶನಾಲಯದ ಆದೇಶದನ್ವಯ ಪುನರ್‌ಸ್ಥಾಪಿಸಲಾಗಿತ್ತು. ಸದರಿ ಆದೇಶದನ್ವಯ ನೌಕರರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ ಇಲ್ಲಿ ದಿನಾಂಕ:20.02.2007ರಂದು ಹಾಜರಾಗಿರುತ್ತಾರೆ. ನಂತರ ಈ ಹಿಂದಿನ ಕಛೇರಿಯಲ್ಲಿ ನಡೆದುಕೊಂಡ ರೀತಿಯಲ್ಲಿಯೇ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗುವ ಪ್ರವೃತ್ತಿಯನ್ನು ಮುಂದುವರಿಸಿರುವುದು ಕಂಡುಬಂದಿದ್ದು, ಇವರ ಕೆಲವು ರಜೆಗಳನ್ನು ಮಾನವೀಯ ದೃಷ್ಟಿಯಿಂದ ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದ್ದು, ಒಟ್ಟಾರೆ ಈ ಕೆಳಕಂಡಂತೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ಕಂಡುಬರುತ್ತದೆ.

1) ದಿನಾಂಕ:24.07.2006 ರಿಂದ 27.07.2006– 4 ದಿನಗಳು
2) ದಿನಾಂಕ:14.08.2006 ರಿಂದ 06.12.2006 – 115 ದಿನಗಳು
3) ದಿನಾಂಕ:23.04.2007 ರಿಂದ 30.08.2007 – 130 ದಿನಗಳು
4) ದಿನಾಂಕ:07.09.2007 ರಿಂದ 28.02.2008 – 175 ದಿನಗಳು
5) ದಿನಾಂಕ:05.03.2009 ರಿಂದ 12.10.2009 – 222 ದಿನಗಳು

**ಒಟ್ಟು 646 ದಿನಗಳು**

ಒಟ್ಟಾರೆ ಈ ನೌಕರರು ಮೇಲಿಂದ ಮೇಲೆ ಕರ್ತವ್ಯಕ್ಕೆ ಗೈರು ಹಾಜರಾಗುವ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದು, ಇವರಿಗೆ ವಹಿಸಲಾದ ಕರ್ತವ್ಯಗಳನ್ನು ಮಾಡಲು ಸಹ ಅಸಮರ್ಥರಾಗಿದ್ದು, ಗಣತಿದಾರರ ಹುದ್ದೆಯಲ್ಲಿ ಮುಂದುವರೆಯಲು ಅನರ್ಹರೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಶ್ರೀ ಮಹೇಶ್‌ಕುಮಾರ್ ಬಿ.ಹೊರಟ್ಟಿ ಇವರು ಗಣತಿದಾರರಾಗಿ ಸರ್ಕಾರದ ಸೇವೆಗೆ ಸೇರಿದ ದಿನಾಂಕದಿಂದ ಖಾಯಂಪೂರ್ವ ಪರೀಕ್ಷಾವಧಿಯಲ್ಲಿ ಸಂಬಂಧಪಟ್ಟ ಇಲಾಖಾ ಪರೀಕ್ಷೆ ತೇರ್ಗಡೆ ಹೊಂದಬೇಕಾದ ಷರತ್ತುಗಳನ್ನು ಪೂರೈಸಿರುವುದಿಲ್ಲ ಹಾಗೂ ಖಾಯಂಪೂರ್ವ ಅರ್ಹತಾ ಅವಧಿಯನ್ನು ವಿಸ್ತರಿಸಲಾದ ಅವಧಿಯಲ್ಲಿಯೂ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆ ಹೊಂದಿರುವುದಿಲ್ಲ.

ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ, ಗಣತಿದಾರರು, ಈಗಾಗಲೇ ವಿವರಿಸಿರುವಂತೆ ಪದೇ ಪದೇ ಮೇಲೆ ತಿಳಿಸಿರುವಂತೆ ಒಟ್ಟಾರೆ 646 ದಿನಗಳು ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದಲ್ಲದೇ, ಗಣತಿದಾರರ ಹುದ್ದೆಗೆ ವಹಿಸಲಾದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾಗಿರುವುದರಿಂದ ಹಾಗೂ ಸದರಿ ಹುದ್ದೆಗೆ ಅರ್ಹರಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಖಾಯಂಪೂರ್ವ ಪರೀಕ್ಷಾ ಅವಧಿಯು ಸಂಪೂರ್ಣವಾಗಿ ಅತೃಪ್ತಿಕರವಾಗಿರುವುದರಿಂದ, 1977ರ ಕರ್ನಾಟಕ ಸರ್ಕಾರಿ ಸೇವಾ (ಅರ್ಹತಾ ಪರೀಕ್ಷಾ) ನಿಯಮಗಳ ನಿಯಮ 5(1)(ಬಿ) ಮತ್ತು 6(1)ರ ಪ್ರಕಾರ ಇವರನ್ನು ಸರ್ಕಾರದ ಸೇವೆಯಿಂದ ತೆಗೆದುಹಾಕಲು ಅನುಮತಿ ಕೋರಿ ಸರ್ಕಾರಕ್ಕೆ ಉಲ್ಲೇಖ (2)ರ ಮೂಲಕ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು. ಉಲ್ಲೇಖ (3)ರಲ್ಲಿ ತಿಳಿಸಲಾದ ಸರ್ಕಾರದ ಪತ್ರದಲ್ಲಿ, ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ, ಗಣತಿದಾರರು ಇವರನ್ನು ಸರ್ಕಾರದ ಸೇವೆಯಿಂದ ವಜಾಗೊಳಿಸಲು ಸರ್ಕಾರವು ಅನುಮತಿ ನೀಡಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ:394:2009-10**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ, ಗಣತಿದಾರರು, ತಾಲ್ಲೂಕು ಕಛೇರಿ, ಬೈಲಹೊಂಗಲ (ನಿಯೋಜನೆ ಮೇಲೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ) ಇವರನ್ನು 1977ರ ಕರ್ನಾಟಕ ಸರ್ಕಾರಿ ಸೇವಾ (ಅರ್ಹತಾ ಪರೀಕ್ಷಾ) ನಿಯಮಗಳ ನಿಯಮ 5(1)(ಬಿ) ಮತ್ತು 6(1)ರ ಅನ್ವಯ ಇವರು

ಗಣತಿದಾರರ ಹುದ್ದೆಗೆ ಅನರ್ಹರೆಂದು ತೀರ್ಮಾನಿಸಲಾಗಿದೆ ಹಾಗೂ ಸರ್ಕಾರದ ಅನುಮತಿಯನ್ವಯ ಶ್ರೀ ಮಹೇಶ್‌ಕುಮಾರ್ ಬಿ. ಹೊರಟ್ಟಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಗೊಳಿಸಲಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.1075 ನಿರ್ದೇಶಕರು.

**PROCEEDINGS OF THE ASSISTANT COMMISSIONER OF COMMERCIAL TAXES, LOCAL VAT OFFICE-040, BANGALORE, DATED:26TH OCTOBER, 2009**

**Present:** B.N. Rame Gowda, Asst. Commr. Of Comml.Taxes.

**Subject:** Loss of "C" Form in case of M/s Bosch Limited, (earlier it was M/s. Motor Industries Co.Ltd.,) Bangalore.

**Read:** Letter Dated:09.07.2009 of M/s Bosch Limited (earlier it was M/s. Motor Industries Co.Ltd.,) Bangalore.

**Preamble:**

M/s Bosch Limited (earlier it was Motor Industries Co.Ltd.,) Post Box No.3000, Hosur Road, Adugodi, Bangalore-560 030, is a registered dealer born on the files of this office bearing TIN 29140139615. The company in its letter cited at read above has intimated that the below mentioned "C' Form issued by the department, is lost in transit.

| Sl. No. | C form No. | Name of the party to whom 'C' issued | Amount |
|---|---|---|---|
| 1. | TCK-R-3675933 | M/s ITW India Limited (ITW Chemin), Plot No.34 to 37, Phase-2, IDA, APIIC, Pashammylaram. A.P. TIN No.28560199252 | Rs.18,61,164 |
| | TCK-R-3675934 | Same as above | Rs.16,14,907 |
| | TCK-R-3675935 | Same as above | Rs.17,16,427 |
| | TCK-R-3675936 | Same as above | Rs.17,70,767 |

The company has produced the proof for having filed the complaint to police authorities for loss of above 'C' Forms and executed Indemnity Bond in favour of the Government as laid down under Rule 12(2) and 12(9) of CST Act, 1956.

Since the above said 'C' forms lost in transit, the Forms so lost is treated as Invalid. Hence this order.

**ORDER NO.ACCT/LVO-040/2009-10, Dated:26th October, 2009**

In view of the circumstances explained above the C forms Sl.Nos. TCK-R-3675933, TCK-R-3675934, TCK-R-3675935 & TCK-R-3675936 are treated as invalid with immediate effect.

**B.N. RAME GOWDA**

Assistant Commissioner of Commercial Taxes,

LVO-040, Koramangala, Bangalore-47.

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-040, BANGALORE,**

**Notified Authority Under Rule 6(i) of the CST (Karnataka) Rules 1957,**

**NOTIFICATION**

**No.ACCT/LVO-040/09-10, Dated:26th October, 2009**

By Virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and Invalid.

| Sl. No. | Number (including code No.) of declaration Forms Lost destroyed or stolen | Name and address of the dealer to whom declaration Forms/is/are issued by the department with date of C form issue | Registration certificate No. of the dealer under CST Act, 1956 | The address of the dealer to whom the declaration is/ are sent | Date of issue of Form/s by the dealer | Whether Lost/ Stolen destroyed | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | 'C' Form Sl.No.TCK-R 3675933 to 3675936 in Original & Duplicate. | M/s Bosch Limited (earlier it was Motor Industries Co.Ltd., Naganathapura Plant, PB No.6887, Electronic City Post Office, Bangalore-560100, | TIN 29140139615 | M/s ITW India Limited (ITW Chemin), IDA, Pashammylaram Unit. A.P. | 05.10.2007 | Lost | Issued from April 2006 to March 2007 Period total amount of Rs.69,63,265/- |

**B.N. RAME GOWDA**

PR-1051

Assistant Commissioner of Commercial Taxes,
LVO-040, Koramangala, Bangalore-47.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 545 ಡಿಪಿಐ 2007, ಬೆಂಗಳೂರು, ದಿನಾಂಕ:22ನೇ ಅಕ್ಟೋಬರ್, 2009**

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದದ (ವಿಶೇಷ ವರ್ಗ) ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2007 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ–ವಿಭಾಗೀಯ ಅಧೀಕ್ಷಕರು (ಸಂಗೀತ, ನೃತ್ಯ, ನಾಟಕ).

ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದದ (ವಿಶೇಷ ವರ್ಗ) ವಿಭಾಗೀಯ ಅಧೀಕ್ಷಕರು (ಸಂಗೀತ, ನೃತ್ಯ, ನಾಟಕ) ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008 ರಂದು ಇದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 545 ಡಿಪಿಐ 2007, ದಿನಾಂಕ:31.01.2008 ರಂದು ಪ್ರಕಟಿಸಿ, ಈ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಭಾದಿತರಾದ ಅಧಿಕಾರಿಗಳು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಏನಾದರೂ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಸದರಿ ಪಟ್ಟಿಯ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದದ (ವಿಶೇಷ ವರ್ಗ) ವಿಭಾಗೀಯ ಅಧೀಕ್ಷಕರು (ಸಂಗೀತ, ನೃತ್ಯ ನಾಟಕ) ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪ್ರಕಟಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ)

ಅನುಬಂಧ

(ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 545 ಡಿಪಿಐ 2007, ದಿನಾಂಕ;22.10.2009)

ಗ್ರೂಪ್–'ಬಿ' ವೃಂದದ (ವಿಶೇಷ ವರ್ಗ) ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ

ದಿನಾಂಕ:01.01.2007 ರಲ್ಲಿದ್ದಂತೆ–ವಿಭಾಗೀಯ ಅಧೀಕ್ಷಕರು, (ಸಂಗೀತ, ನೃತ್ಯ, ನಾಟಕ)

| **ಕ್ರಮ ಸಂಖ್ಯೆ** | **ಗ್ರೇಡ್–1 ಕ್ರಮ ಸಂಖ್ಯೆ** | **ಜಾತಿ** | **ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ** | **ಜನ್ಮ ದಿನಾಂಕ** | **ಪ್ರಸ್ತುತ ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ** | **ಷರಾ** |
|---|---|---|---|---|---|---|
| 1. | 01 | – | ಎಂ. ಲಿಂಗಮ್ಮ | 12.02.1949 | 04.01.2005 | ನಿವೃತ್ತ |
| 2. | 02 | – | ತಮ್ಮಯ್ಯ | 15.07.1950 | 04.01.2005 | |

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ)

ಪಿ.ಆರ್.1052

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018**

**ಕ್ರ.ಸಂ.ಜೆಆರ್‌ಬಿ:ಸಮಾಪನೆ:38:ಎಲ್‌ಎಂಸಿ:2004–05, ದಿನಾಂಕ:29ನೇ ಸೆಪ್ಟೆಂಬರ್, 2009**

**ವಿಷಯ:** ಸ್ಥಗಿತಗೊಂಡಿರುವ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ಗುಬ್ಬಿ ಈ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**1) ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರ ಪತ್ರದ ಸಂಖ್ಯೆ: ಡಿಆರ್‌ಟಿ/ಡಿಎಲ್‌ಎಸ್ / 32/2004–05, ದಿನಾಂಕ:25.01.2005 ಮತ್ತು 19.01.2006.

2) ಈ ಕಛೇರಿಯ ಸಮಸಂಖ್ಯೆಯ ಆದೇಶದ ದಿನಾಂಕ:23.01.2008.

3) ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರ ಪತ್ರದ ಸಂಖ್ಯೆ:ಡಿಆರ್‌ಟಿ/ ಡಿಎಲ್‌ಎಸ್ / 32/2004–05, ದಿನಾಂಕ:01.09.2009.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ಗುಬ್ಬಿ, ತುಮಕೂರು ಜಿಲ್ಲೆ, ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಟಿ–759 ದಿನಾಂಕ:15.11.1954ರಲ್ಲಿ ನೊಂದಣಿಯಾಗಿರುತ್ತದೆ. ಸಂಘವು ತಾಲ್ಲೂಕುಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿದ್ದು, ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದು, ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 31ರ ಪ್ರಕಾರ ವಿಶೇಷಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಸಂಘವನ್ನು ಉಲ್ಲೇಖ (2) ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು.

ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರು ಉಲ್ಲೇಖ (3)ರಲ್ಲಿ ಪ್ರಸ್ತಾವನೆ ಸಲ್ಲಿಸಿ, ಸಂಘವು ಗುಬ್ಬಿ ಪಟ್ಟಣದ ಮಧ್ಯಭಾಗದಲ್ಲಿದ್ದು, ತನ್ನದೇ ಆದಂಥಹ ಸ್ವಂತ ಕಟ್ಟಡ ಹೊಂದಿರುತ್ತದೆ. ಸಂಘದ ಸದಸ್ಯರಲ್ಲಿ ಬಹಳಷ್ಟು ಜನರು ಹಿಂದುಳಿದವರು, ಅಲ್ಪಸಂಖ್ಯಾತರು ಹಾಗೂ ಪರಿಶಿಷ್ಟ ವರ್ಗದವರಿದ್ದು, ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಹೊಂದಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಕೋರಿರುತ್ತಾರೆ.

ಉಪನಿಬಂಧಕರು ಉಲ್ಲೇಖ (3)ರಲ್ಲಿ ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ, ಸಂಘದ ಸದಸ್ಯರ ಹಿತದೃಷ್ಟಿಯಿಂದ ಉಲ್ಲೇಖ (2)ರ ಈ ಕಛೇರಿಯ ಸಮಾಪನಾ ಆದೇಶ ದಿನಾಂಕ:28.02.2006ನ್ನು ಹಿಂದಕ್ಕೆ ಪಡೆದು ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ಗುಬ್ಬಿ, ತುಮಕೂರು ಜಿಲ್ಲೆ, ಈ ಸಹಕಾರ ಸಂಘವನ್ನು ಕಲಂ 72() ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಜೆಆರ್‌ಬಿ/ಸಮಾಪನೆ/ 38/ಎಲ್‌ಎಂಸಿ/2004–05, ದಿನಾಂಕ:28.02.2006ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸದರಿ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು:**

1) ಸಂಘವು ಪುನಃಶ್ಚೇತನಗೊಂಡ 6 ತಿಂಗಳಲ್ಲಿ ಸಂಘದ ಷೇರು ಮೊಬಲಗನ್ನು ದ್ವಿಗುಣಗೊಳಿಸತಕ್ಕದ್ದು.

2) ಸಂಘದ ವಾರ್ಷಿಕ ಮಹಾಸಭೆಯನ್ನು ಪ್ರತಿ ವರ್ಷ ನಿಗದಿತ ಸಮಯದಲ್ಲಿ ನಡೆಸತಕ್ಕದ್ದು.

3) ಸಂಘದ ಲೆಕ್ಕಪರಿಶೋಧನೆಯನ್ನು ಪ್ರತಿವರ್ಷ ನಿಗದಿತ ಸಮಯದಲ್ಲಿ ತಯಾರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:29.09.2009 ರಂದು ನೀಡಿರುತ್ತೇನೆ.

**ಸಿ.ಎಸ್. ವೀರೇಶ್**

ಪಿ.ಆರ್.995

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು (UR/441)

## ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ನಂ.11, ಬುಲ್‌ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು–560004

**ವಿಷಯ:** ಶ್ರೀ ಜಿ. ಶಶಿಕುಮಾರ್ ಬಿನ್ ಲೇಟ್ ಗುರುಲಿಂಗ ಶಾಸ್ತ್ರಿ, ಅರಳೇಪೇಟೆ, ಕೋಲಾರ ಇವರು ಸಾಲವನ್ನು ಮರುಪಾವತಿ ಮಾಡದೇ ಇರುವ ಪ್ರಯುಕ್ತ ಸದರಿಯವರ ಸ್ತಿರಾಸ್ತಿಯನ್ನು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಇವರ ಹೆಸರಿಗೆ ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ:** 1) ಅಮಲ್ಜಾರಿ ಸಂಖ್ಯೆ: 03/2000–01.

2) ಮಾರಾಟಾಧಿಕಾರಿಗಳು ಕ.ರಾ.ಕೈ.ವಾ.ಸ.ಬ್ಯಾಂಕ್ ನಿ., ಶಾಖೆ ಕೋಲಾರ ಇವರ ಪ್ರಸ್ತಾವನೆ ದಿನಾಂಕ: 28.03.2009.

3) ಉಪ ಪ್ರಧಾನ ವ್ಯವಸ್ಥಾಪಕರು, ದಾವಾ ಮತ್ತು ವಸೂಲಾತಿ ವಿಭಾಗ ಪತ್ರ ಸಂಖ್ಯೆ: ಆರ್‌ಡಿ/ಆರ್2/ಎನ್‌ಬಿಎ/628/2009–10, ದಿನಾಂಕ:11.05.2009.

4) ಈ ಕಛೇರಿ ನೋಟೀಸ್ ಸಂಖ್ಯೆ: ಸ.ಸಂ.ಸ.ನಿ/ವ.ಅ./1406/2009–10, ದಿನಾಂಕ:01.07.2009 ಮತ್ತು ಸಹಕಾರ ಸ.ಸಂ.ಸ.ನಿ/ವ.ಅ/4125/2009–10, ದಿನಾಂಕ:10.08.2009.

**ಪ್ರಸ್ತಾವನೆ:**

ಶ್ರೀ ಜಿ. ಶಶಿಕುಮಾರ್ ಬಿನ್ ಲೇಟ್ ಗುರುಲಿಂಗಶಾಸ್ತ್ರಿ, ಅರಳೇಪೇಟೆ, ಕೋಲಾರ–563 101, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಕೇಂದ್ರ ಕಛೇರಿ, ಬೆಂಗಳೂರು ಇದರ ಕೋಲಾರ ಶಾಖೆಯಲ್ಲಿ ಸಾಲ ಪಡೆದಿದ್ದು ಅಸಲು, ಬಡ್ಡಿ ಮತ್ತು ಇತರೆ ಖರ್ಚು ಸೇರಿ ಒಟ್ಟು ರೂ.8,66,920/–ಗಳಿಗೆ (28.02.2009 ರವರೆಗೆ) ಸುಸ್ತಿಯಾಗಿದ್ದು, ಹಿಂದಿನ ವ್ಯಾಜ್ಯ ಸಂಖ್ಯೆ ಆರ್.ಸಿ.ಎಸ್/ಪಿಅಂಡ್‌ಎಂ/ ಡಿ.ಐ.ಎಸ್./ಡಿ–7/1106/1988–09, ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯುಬಿಎಫ್/ಟಿ–1052/2005–06 ವಸೂಲಿಗಾಗಿ ಬ್ಯಾಂಕಿನವರು ದಿನಾಂಕ:15.12.2005 ಹಾಗೂ ಅಮಲ್ಜಾರಿ ಸಂಖ್ಯೆ:03/2000–01 ದಿನಾಂಕ:16.06.2000 ರಂದು ಪಡೆಯಲಾಗಿದ್ದು, ಆದರೂ ಬ್ಯಾಂಕಿಗೆ ಸಾಲ ಮರುಪಾವತಿ ಮಾಡಿರುವುದಿಲ್ಲ.

ತೀರ್ಪಿನ ನಂತರದಲ್ಲಿಯೂ ಸಹ ಬಾಕಿ ಹಣವು ಬ್ಯಾಂಕಿಗೆ ಜಮಾ ಆಗದೆ ಇರುವ ಕಾರಣದಿಂದಾಗಿ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ 03/2000–01 ಯನ್ನು ಬ್ಯಾಂಕಿನ ಮಾರಾಟಾಧಿಕಾರಿಯ ವಶಕ್ಕೆ ನೀಡಲಾಗಿತ್ತು. ಅದರಂತೆ ಮಾರಾಟಾಧಿಕಾರಿಯು ವಸೂಲಿ ಕ್ರಮ ನಡೆಸಿ, ತೀರ್ಪುಸಾಲಗಾರರ ಪೂರಾ ಸ್ಥಿರಾಸ್ತಿಯನ್ನು ಅನೇಕ ಬಾರಿ ಹರಾಜಿಗೆ ಒಳಪಡಿಸಿ, ಅಂತಿಮವಾಗಿ ದಿನಾಂಕ:28.02.2009 ರಂದು ಬಹಿರಂಗ ಹರಾಜಿಗೆ ಒಳಪಡಿಸಿರುತ್ತಾರೆ. ಸದರಿ ಹರಾಜಿನ ದಿನಾಂಕದಂದು ಹರಾಜಿನಲ್ಲಿ ಯಾವ ಬಿಡ್ಡುದಾರರೂ ಭಾಗವಹಿಸದೇ ಇರುವ ಪ್ರಯುಕ್ತ ತೀರ್ಪುಸಾಲಗಾರರ ಸ್ಥಿರಸ್ವತ್ತನ್ನು ಬ್ಯಾಂಕಿಗೆ ಬರಬೇಕಾದ ಅಸಲು ಬಡ್ಡಿ ಮತ್ತು ಇತರೆ ಖರ್ಚು ಸೇರಿ ರೂ.8,66,920/– ಆಗಿದ್ದು, ಸದರಿ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ.6,00,000/– ಗಳಿಗೆ ಬ್ಯಾಂಕಿನ ಹೆಸರಿಗೆ ವರ್ಗಾಯಿಸುವಂತೆ, ಮಾರಾಟಾಧಿಕಾರಿಯು ವರದಿ ಸಲ್ಲಿಸಿರುವುದನ್ನು ಒಪ್ಪಲಾಗಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಸ್ಥಿರಸ್ವತ್ತನ್ನು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಇವರಿಗೆ ವರ್ಗಾವಣೆ ಮಾಡಲಾಗುವುದೆಂದು ಈ ನ್ಯಾಯಾಲಯದಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ಹಾಗೂ 1960ರ ನಿಯಮ 38ಎ (4)ರ ಅನ್ವಯ ನೋಟೀಸ್ ನೀಡಲಾಗಿದ್ದರೂ ಸಹ ಬಾಕಿ ಹಣ ಜಮಾ ಮಾಡಿರುವುದಿಲ್ಲ. ಮತ್ತು ಈ ಕಛೇರಿಗೆ ಯಾವುದೇ ಆಕ್ಷೇಪಣೆಗಳನ್ನು ಸಹ ಸಲ್ಲಿಸಿರುವುದಿಲ್ಲ. ಆದುದರಿಂದ ಅವರ ಷೆಡ್ಯೂಲ್ ಸ್ಥಿರಾಸ್ತಿಯನ್ನು ಡಿಕ್ರಿದಾರರಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಇವರ ಹೆಸರಿಗೆ ವರ್ಗಾವಣೆ ಮಾಡುವುದು ಅವಶ್ಯಕವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

### ಆದೇಶ

**ಸ.ಸಂ.ಸ.ನಿ/ವ.ಅ/ಕ.ರಾ.ಕೈ.ವಾ.ಸ.ಬ್ಯಾಂಕ್/09/ಸಿ.ಇ.ಪಿ.ಸಂಖ್ಯೆ:03/2000–01, ದಿನಾಂಕ:15ನೇ ಅಕ್ಟೋಬರ್, 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಂ.ಚನ್ನಭೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ನಿಯಮ 441 ಹಾಗೂ ವಸೂಲಿ ಅದಿಕಾರಿಗಳು, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 (ಬಿ) ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳನ್ನು 1960ರ ನಿಯಮ 38ಎ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿ.ಎಂ.ಡಬ್ಲ್ಯೂ.69 ಸಿ.ಎಲ್.ಎಂ.2001 ದಿನಾಂಕ:21.11.2001 ರಂತೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ. ಶಶಿಕುಮಾರ್, ಬಿನ್ ಲೇಟ್ ಗುರುಲಿಂಗ ಶಾಸ್ತ್ರಿ, ಅರಳೇ ಪೇಟೆ, ಕೋಲಾರ, ಮನೆ ಖಾತಾ ನಂ.1675/1883, ಹೊಸ

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ, ಇವರ ನ್ಯಾಯಾಲಯದಲ್ಲಿ**

**ಸಂ: ಇಎಕ್ಸ್‌ಇ/ಡಿಟಿಸಿಆರ್‌ಎಂ/82/2008-09, ದಿನಾಂಕ:16ನೇ ಅಕ್ಟೋಬರ್, 2009**

**ಉಪಸ್ಥಿತರು:** ಸಿ.ಎಲ್. ಜಯರಾಮ್,

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು/ ಅರ್ಜಿದಾರರು** |
|---|---|---|
| ಅಬಕಾರಿ ನಿರೀಕ್ಷಕರು, ಅಬಕಾರಿ ಉಪ ಆಯುಕ್ತರ ಕಛೇರಿ, ಮಡಿಕೇರಿ. | | 1) ಪ್ರೇಮಜಿತ್ ತಂದೆ ವೇಣುಗೋಪಾಲ್ ವಿ. (ವಾಹನ ಚಾಲಕ), ವಡಗರ ಗ್ರಾಮ ಮತ್ತು ಅಂಚೆ, ಕೊಯಿಕೊಡ್ ಜಿಲ್ಲೆ, ಕೇರಳ.<br>2) ವಾಹನ ಮಾಲೀಕರು ಗೊತ್ತಿಲ್ಲ. |

ದಿನಾಂಕ:19.04.2009 ರಂದು ಸಮಯ ರಾತ್ರಿ 8.30 ಗಂಟೆಯಲ್ಲಿ 2009ರ ಲೋಕಸಭಾ ಚುನಾವಣೆ ಸಂಬಂಧವಾಗಿ ಮಡಿಕೇರಿ ತಾಲ್ಲೂಕು ಸಂಪಾಜೆ ಗೇಟ್‌ನಲ್ಲಿ ಕರ್ತವ್ಯದ ನಿಮಿತ್ತ ವಾಹನಗಳನ್ನು ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ಮಡಿಕೇರಿ ಕಡೆಯಿಂದ ಸುಳ್ಯದ ಕಡೆಗೆ ಒಂದು ಅಶೋಕ್ ಲೈಲೆಂಡ್ ಲಾರಿ ಸಂಖ್ಯೆ: ಕೆಎ-07-ಬಿ-2572 ಬಂದಿದ್ದು ಅದನ್ನು ತಡೆದು ನಿಲ್ಲಿಸುವಷ್ಟರಲ್ಲಿ ಅದರಲ್ಲಿದ್ದ ಲಾರಿ ಕ್ಲೀನರ್ ಓಡಿಹೋಗಿದ್ದು, ಲಾರಿಯ ಚಾಲಕನನ್ನು ಅಲ್ಲಿ ಸೇರಿದ್ದ ಸಿಬ್ಬಂದಿ ಹಾಗೂ ಸಾರ್ವಜನಿಕರ ಸಹಾಯದಿಂದ ಹಿಡಿದು ಲಾರಿಯಲ್ಲಿ ಏನಿದೆ ಎಂದು ಕೇಳಲಾಗಿ ಇದರಲ್ಲಿ ಕೋಳಿ ಮೊಟ್ಟೆಗಳಿವೆ ಎಂದು ತಿಳಿಸಿರುವನು. ನಂತರ ಕರ್ತವ್ಯದ ಮೇಲಿದ್ದ ಸಿಬ್ಬಂದಿಯು ತಪಾಸಣೆ ಮಾಡುವ ಸಲುವಾಗಿ ಲಾರಿಗೆ ಹತ್ತಿ, ಒಳಗಡೆ ಏನಿದೆ ಎಂದು ನೋಡಲಾಗಿ ಅದರಲ್ಲಿ ಅಂದಾಜು 10,000 ಮೊಟ್ಟೆಗಳಿದ್ದು, ಮೊಟ್ಟೆಗಳು ಕೆಟ್ಟು ದುರ್ವಾಸನೆ ಬರುತ್ತಿದ್ದು ಇದರಿಂದ ಸಂಶಯಗೊಂಡು ಪೂರ್ತಿಯಾಗಿ ಪರಿಶೀಲಿಸಲಾಗಿ ಅದರಲ್ಲಿ 35 ಲೀಟರ್ ಗಾತ್ರದ ಬಿಳಿಯ ಪ್ಲಾಸ್ಟಿಕ್ ಕ್ಯಾನ್‌ಗಳಿದ್ದು ಅದರ ತುಂಬಾ ಬಿಳಿಯ ದ್ರವ ಕಂಡು ಬಂದಿರುತ್ತದೆ. ನಂತರ ಅಲ್ಲಿ ಸೇರಿದ್ದ ಸಿಬ್ಬಂದಿ ಹಾಗೂ ಸಾರ್ವಜನಿಕರ ಸಮಕ್ಷಮ ಕ್ಯಾನಿನ ಮುಚ್ಚಳವನ್ನು ತೆರೆದು ನೋಡಲಾಗಿ ತುಂಬಾ ಘಾಟು ವಾಸನೆಯಿಂದ ಕೂಡಿದ ಬಿಳಿಯ ದ್ರವ ಇದ್ದು ಇದನ್ನು ಪಂಚರು ಮದ್ಯಸಾರವೆಂದು ಗುರುತಿಸಿದ ನಂತರ ಲಾರಿಯಲ್ಲಿದ್ದ ಎಲ್ಲಾ ಕ್ಯಾನುಗಳನ್ನು ಎಣಿಸಿ ನೋಡಲಾಗಿ ಒಟ್ಟು 35 ಲೀಟರ್ ಗಾತ್ರದ 216 ಬಿಳಿಯ ಬಣ್ಣದ ಕ್ಯಾನಿನ ತುಂಬಾ ಮದ್ಯಸಾರವಿದ್ದು ಒಟ್ಟು 7560 ಲೀಟರ್ ಆಗಿರುತ್ತದೆ. ನಂತರ ಲಾರಿಯ ಚಾಲಕನನ್ನು ಈ ಮದ್ಯಸಾರವನ್ನು ತರಲು ಸರ್ಕಾರದಿಂದ ನೀಡಲಾದ ರಹದಾರಿ ವಗೈರೆ ವಿಚಾರಿಸಲಾಗಿ ಯಾವುದು ಇಲ್ಲವೆಂದು ಹಾಗೂ ಈ ಲಾರಿಯನ್ನು ಮೈಸೂರಿನ ಹತ್ತಿರದ ಮೇಟಗಳ್ಳಿ ಎಂಬ ಊರಿನಿಂದ ರಮೇಶ ಎಂಬಾತನು ಪುತ್ತೂರಿಗೆ ಕೊಟ್ಟು ಬಾ ಎಂದು ತಿಳಿಸಿದ ಮೇರೆಗೆ ನಾನು ಈ ಲಾರಿಯನ್ನು ಮೈಸೂರಿನಿಂದ ವಿರಾಜಪೇಟೆ ಮಾರ್ಗವಾಗಿ ಇಲ್ಲಿಗೆ ತಂದಿರುವುದಾಗಿ ತಿಳಿಸಿರುತ್ತಾನೆ. ನಂತರ ಆಸಾಮಿಯ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ವಿ.ಪ್ರೇಮ್‌ಜಿತ್ ತಂದೆ ವೇಣುಗೋಪಾಲ್, ವಡಗರ ಗ್ರಾಮ ಮತ್ತು ಅಂಚೆ, ಕೊಯಿಕೊಡ್ ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿರುತ್ತಾನೆ. ನಂತರ ಓಡಿ ಹೋದ ವ್ಯಕ್ತಿಯ ಹೆಸರು ವಿಳಾಸ ಕೇಳಲಾಗಿ ಹೆಸರು ಶಶಿ, ತಂದೆ ಹೆಸರು ಗೊತ್ತಿಲ್ಲ ಮೈಸೂರು ಜಿಲ್ಲೆ ಎಂದು ತಿಳಿಸಿರುತ್ತಾನೆ ಲಾರಿಯ ಮಾಲೀಕ ಯಾರು ಎಂಬುವುದು ತಿಳಿದು ಬಂದಿರುವುದಿಲ್ಲ. ಲಾರಿಯಲ್ಲಿ ಇದ್ದ ಒಟ್ಟು 216 ಮದ್ಯಸಾರ ತುಂಬಿದ ಕ್ಯಾನುಗಳ ಪೈಕಿ ಒಟ್ಟು 10 ಕ್ಯಾನುಗಳಿಂದ ತಲಾ ಒಂದೊಂದು ಕ್ಯಾನುಗಳಿಂದ 180 ಮೀಲಿಯ 3 ಬಾಟಲಿಗಳಂತೆ ಒಟ್ಟು 30x180 ಮೀಲಿನ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಮುಚ್ಚಳ ಹಾಕಿ ಬಟ್ಟೆ ಸುತ್ತಿ ಸೀಲು ಮಾಡಲಾಗಿರುತ್ತದೆ. ನಂತರ ಲಾರಿಯಲ್ಲಿ ದುರ್ವಾಸನೆಯಿಂದ ಕೂಡಿದ ಕೊಳೆತ ಮೊಟ್ಟೆಯನ್ನು ಸಾಗಿಸುವುದು ಅನಾನುಕೂಲವಾದ್ದರಿಂದ ಸ್ಥಳದಲ್ಲಿಯೇ ನಾಶಪಡಿಸಿ ಆರೋಪಿ ಸಮೇತ ಲಾರಿ ಸಂಖ್ಯೆ: ಕೆಎ-07-ಬಿ-2572 ಹಾಗೂ 216 ಕ್ಯಾನು ಮದ್ಯಸಾರವನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡ ಅಬಕಾರಿ ನಿರೀಕ್ಷಕರು, ಅಬಕಾರಿ ಉಪ ಆಯುಕ್ತರ ಕಛೇರಿ, ಮಡಿಕೇರಿ ಇವರು ಪ್ರ.ವ.ಸಂ.5/08-09 ರಂತೆ ಪ್ರಕರಣ ದಾಖಲಿಸಿಕೊಂಡು ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಅಬಕಾರಿ ಉಪ ಆಯುಕ್ತರ ಕಛೇರಿ ಇವರು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ ಮದ್ಯಸಾರದಿಂದ ಮಾದರಿ ತೆಗೆಯಲಾಗಿದ್ದ ಒಟ್ಟು 30x180 ಮೀಲಿನ ಬಾಟಲಿಗಳನ್ನು ದಿನಾಂಕ:01.06.2009ರಂದು ಮುಖ್ಯ ರಾಸಾಯನಿಕ ತಜ್ಞರು ಕೇಂದ್ರ ಪ್ರಯೋಗಾಲಯ (ಅಬಕಾರಿ ಇಲಾಖೆ) ಬೆಂಗಳೂರು ಇವರಲ್ಲಿ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು ತಜ್ಞರ ವರದಿ ಸಂಖ್ಯೆ: ಸಿಸಿಎಲ್ 2839/2009 ದಿನಾಂಕ:01.06.2009ರಲ್ಲಿ ಸದರಿ ದ್ರವದಲ್ಲಿ ಮದ್ಯಸಾರದ ಅಂಶ 62.0% ರಿಂದ 64.4% ವರೆಗೆ ಇರುವುದಾಗಿ ದೃಢೀಕರಿಸಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಮದ್ಯಸಾರವನ್ನು ಅಬಕಾರಿ ನಿರೀಕ್ಷಕರ ವರದಿಯ ಆಧಾರದ ಹಿನ್ನೆಲೆಯಲ್ಲಿ ಮದ್ಯಸಾರವು ಹೊತ್ತಿ ಉರಿಯುವ ದ್ರವವಾಗಿದ್ದು ಹೆಚ್ಚು ಸಮಯ ಇಟ್ಟುಕೊಳ್ಳುವುದು ಅಪಾಯವಾಗಿರುವುದನ್ನು ಪರಿಗಣಿಸಿ ಸದರಿ ಮದ್ಯಸಾರವನ್ನು ದಿನಾಂಕ:23.07.2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸರ್ಕಾರದ ಆದೇಶದಂತೆ ನಾಶಪಡಿಸಬೇಕಾದ್ದರಿಂದ ದಿನಾಂಕ:26.08.2009 ರಂದು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ದಿನಾಂಕ:07.10.2009 ರಂದು ಅಬಕಾರಿ ನಿರೀಕ್ಷಕರು ಅಬಕಾರಿ ಉಪ ಆಯುಕ್ತರ ಕಛೇರಿ ಇವರು ಲಿಖಿತವಾದ ವರದಿಯೊಂದನ್ನು ಸಲ್ಲಿಸಿ ಸದರಿ ವಾಹನಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರನ್ನು ಪತ್ತೆಹಚ್ಚಲು "ಬಿ" ಎಕ್ಸ್‌ಟ್ರಾಕ್ಟ್ ಕೋರಿ ಸಂಬಂಧಪಟ್ಟ ಕೋಲಾರದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗೆ ದಿನಾಂಕ:08.05.2009 ರಂದು ಪತ್ರ ಬರೆಯಲಾಗಿದ್ದು, ಸದರಿ ವಾಹನ ಸಂಖ್ಯೆ: ಕೆಎ–07–ಬಿ–2572 ಅವರ ಕಛೇರಿಯಲ್ಲಿ ನೊಂದಾವಣೆಯಾಗಿರುವುದಿಲ್ಲವೆಂದು ಅವರ ಕಛೇರಿ ಪತ್ರ ಸಂಖ್ಯೆ: ಪ್ರಾಸಾಅ/ಕೋ/ನೊಂದಣಿ/ ಕೆಎ–07–ಬಿ–2572 ದಿನಾಂಕ:19.09.2009ರಲ್ಲಿ ಪತ್ರ ಮುಖೇನ ತಿಳಿಸಿರುವುದಾಗಿ, ಸದರಿ ವಾಹನದ ಮಾಲೀಕತ್ವದ ಬಗ್ಗೆ "ಬಿ" ಎಕ್ಸ್‌ಟ್ರಾಕ್ಟ್ ದೊರೆಯದೇ ಇರುವುದರಿಂದ ಮತ್ತು ವಾಹನ ವಶಪಡಿಸಿಕೊಂಡು ಅಂದಾಜು 6 ತಿಂಗಳಾಗುತ್ತಾ ಬಂದಿದ್ದು ಈವರೆಗೆ ವಾಹನಕ್ಕೆ ಸಂಬಂಧಪಟ್ಟವರಾಗಲಿ ಅಥವಾ ಅವರ ಪರ ವಕೀಲರ ಮೂಲಕವಾಗಲೀ ನಮ್ಮ ಕಛೇರಿಗಾಗಲೀ ಅಥವಾ ಪ್ರಾಧಿಕೃತ ಅಧಿಕಾರಿಗಳ ಕಛೇರಿಗಾಗಲೀ ಹಾಜರಾಗಿ ಲಿಖಿತ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ವಾಹನದಲ್ಲಿ ಸಾಗಿಸುತ್ತಿದ್ದ ದ್ರವವು ರಾಸಾಯನಿಕ ತಜ್ಞರ ವರದಿಯಂತೆ ಅಬಕಾರಿ ನಿಷೇದ್ದ ದ್ರವವಾಗಿದ್ದು, ಆರೋಪಿಗಳು ನಕಲಿ ನಂಬರ್ ಪ್ಲೇಟ್ ಬಳಸಿ ವಾಹನವನ್ನು ಈ ಕೃತ್ಯಕ್ಕೆ ಬಳಸಿರುವುದು ಅಬಕಾರಿ ನಿರೀಕ್ಷಕರ ಪ್ರಾಥಮಿಕ ತನಿಖೆಯಿಂದ ದೃಢಪಟ್ಟಿರುವುದಾಗಿ ಮತ್ತು ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಬಹುದಾಗಿ ಶಿಫಾರಸ್ಸಿನೊಡನೆ ಕೋಲಾರದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಪತ್ರವನ್ನು ಲಗತ್ತಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಾಹನ ಮತ್ತು ಸ್ವತ್ತುಗಳನ್ನು ವಶಪಡಿಸಿಕೊಂಡು ಅಂದಾಜು ಸುಮಾರು 6 ತಿಂಗಳು ಕಳೆಯುತ್ತಾ ಬಂದರೂ ಸಹಾ ವಾಹನಕ್ಕೆ ಸಂಬಂಧಪಟ್ಟ ಅಧಿಕೃತ ಮಾಲೀಕರಾಗಲಿ ಅವರ ಪರ ವಕೀಲರಾಗಲಿ ವಶಪಡಿಸಿಕೊಂಡ ಸ್ವತ್ತುಗಳು ತಮ್ಮದೆಂದು ಕೋರಿ ಸೂಕ್ತ ದಾಖಲಾತಿಗಳು ಮತ್ತು ಸಾಕ್ಷಾಧಾರಗಳೊಂದಿಗೆ ಯಾರೂ ಸಹ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸದಿರುವ ಕಾರಣ ಮತ್ತು ರಾಸಾಯನಿಕ ವಿಶ್ಲೇಷಣಾ ಪತ್ರದ ಪ್ರಕಾರ ವಶಪಡಿಸಿಕೊಂಡ ದ್ರವವು ಮದ್ಯಸಾರವೆಂದು ದೃಢಪಟ್ಟಿರುವುದರಿಂದ ವಾಹನದ ಮಾಲೀಕರಾದವರು ಅಬಕಾರಿ ಕಾನೂನಿನ ಅರಿವಿದ್ದೇ ಸರ್ಕಾರಕ್ಕೆ ವಂಚನೆ ಮಾಡುವ ಕೃತ್ಯದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸದರಿ ಪ್ರಕರಣದಲ್ಲಿನ ವಾಹನದ "ಬಿ" ಎಕ್ಸ್‌ಟ್ರಾಕ್ಟ್ ವರದಿ ದೊರೆಯದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 "ಬಿ"ರ ಪ್ರಕಾರ ಕ್ರಮ ಜರುಗಿಸಲು ಸಾಧ್ಯವಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರ ವರದಿಯಂತೆ ವಾಹನಕ್ಕೆ ಸಂಬಂಧಪಟ್ಟವರು ನಕಲಿ ನಂಬರ್ ಪ್ಲೇಟ್ ಅಳವಡಿಸಿ ಅಕ್ರಮ ಸಾಗಾಣಿಕೆ ಮಾಡಿರುವುದು ಪ್ರಾಧಿಕಾರದಲ್ಲಿ ದೃಢಪಟ್ಟಿರುತ್ತದೆ.

ಯಾವುದೇ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗಾಗಿ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನು ಬದ್ಧವಾಗಿ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 'ಸಿ' ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾದಲ್ಲಿ ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಈ ಪ್ರಾಧಿಕಾರವು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಆದ ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ ಡಿಟಿಸಿಆರ್‌ಎಂ/82/2008–09, ದಿನಾಂಕ:16ನೇ ಅಕ್ಟೋಬರ್, 2009**

ಸಿ.ಎಲ್. ಜಯರಾಮ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ 43ಎ ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ಮೊಕದ್ದಮೆ ಸಂಖ್ಯೆ: 5/08–09 ರಲ್ಲಿ ಜಪ್ತುಪಡಿಸಿರುವ ವಾಹನ ಅಶೋಕ್ ಲೈಲೆಂಡ್ ಲಾರಿ ಸಂಖ್ಯೆ: ಕೆಎ–07–ಬಿ–2572 ಅನ್ನು ವಾರಸುದಾರರು ಇಲ್ಲದ ಸ್ವತ್ತೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯಿದೆ 1965ರ 43ಸಿ ರನ್ವಯ ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಸದರಿ ಮುಟ್ಟುಗೋಲು ವಾಹನವನ್ನು ಈ ಆದೇಶವಾದ 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲಾಗುವುದಾಗಿ ಇಂದು ಅಂದರೆ 16.10.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.1046

## ಕಾರ್ಯನಿರ್ವಾಹಕ ಇಂಜಿನಿಯರ್ ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ
## ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005
## ಅಧಿಸೂಚನೆ
## ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005 ಸೆಕ್ಷನ್ 5(1),5(2) ಹಾಗೂ 5(19)ರ ಪ್ರಕಾರ
## ಪಂಚಾಯತ್ ರಾಜ್ ಇಂಜನೀಯರಿಂಗ್ ಇಲಾಖೆ

ಕಾರ್ಯನಿರ್ವಾಹಕ ಇಂಜನೀಯರ್, ಪಂಚಾಯತ್ ರಾಜ್ ಇಂಜನೀಯರಿಂಗ್ ವಿಭಾಗ,ಹಾವೇರಿ ಕಾರ್ಯಾಲಯದ ಅಧಿಸೂಚನೆ ಸಂಖ್ಯೆ ಕಾನಿಇಂ/ಪಂರಾಇಂ/ಹಾವಿ/ಸಿ–1/09–10 ದಿನಾಂಕ:10.08.2009.

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರಡಿಯಲ್ಲಿ ಕಾರ್ಯನಿರ್ವಾಹಕ ಇಂಜನೀಯರ್, ಪಂಚಾಯತ್ ರಾಜ್ ಇಂಜನೀಯರಿಂಗ್ ವಿಭಾಗ,ಹಾವೇರಿ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ, ಸದರಿ ಅಧಿನಿಯಮದ ಸೆಕ್ಷನ್ 5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್ 5(2)ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್ 19(1)ರಡಿಯಲ್ಲಿ ಮೇಲ್ಮನವಿ ಪ್ರಾಧಿಕಾರ ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಕಾ.ನಿ.ಇಂ ಪಂ.ರಾ.ಇಂ.ವಿಭಾಗ, ಹಾವೇರಿ. | ಶ್ರೀ ಎಂ.ಟಿ.ಮಂಜುನಾಥ ಸ.ಇಂ ಪಂ.ರಾ.ಇಂ. ವಿಭಾಗ, ಹಾವೇರಿ | ಶ್ರೀ ಬಿ.ಎಂ.ಕೃಷ್ಣಪ್ಪ ಲೆ.ಪ ಪಂ.ರಾ.ಇಂ. ವಿಭಾಗ, ಹಾವೇರಿ. | ಶ್ರೀ ಜಿ.ಬಿ.ಕಾಮಟೆ ಕಾ.ನಿ.ಇಂ ಪಂ.ರಾ.ಇಂ.ವಿಭಾಗ, ಹಾವೇರಿ. |

ಕಾರ್ಯನಿರ್ವಾಹಕ ಇಂಜನೀಯರ್
ಪಂಚಾಯತ್ ರಾಜ್ ಇಂಜನೀಯರಿಂಗ್
ವಿಭಾಗ, ಹಾವೇರಿ.

### ಕೈಪಿಡಿ–1, ಸಂಸ್ಥೆ/ಕಛೇರಿಯ ರಚನೆ (Organisation Chart) ಅಧಿಕಾರ ಮತ್ತು ಕರ್ತವ್ಯಗಳು

ಕರ್ನಾಟಕ ರಾಜ್ಯದಲ್ಲಿನ ಹಾವೇರಿ ಜಿಲ್ಲೆಯ ಪಂಚಾಯತ್ ರಾಜ್ ಇಂಜನೀಯರಿಂಗ್ ವಿಭಾಗ ಕಛೇರಿಯ ವ್ಯಾಪ್ತಿಯ ರಸ್ತೆಗಳ ನಿರ್ಮಾಣ, ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆ ಕೆಲಸಗಳನ್ನು ಹಾಗೂ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ ದಿ: 01–07–1987 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಈ ವಿಭಾಗ ಕಛೇರಿಯು ಅಧೀಕ್ಷಕ ಇಂಜನೀಯರ್, ಪಂಚಾಯತ್ ರಾಜ್ ಇಂಜನೀಯರಿಂಗ್ ಇಲಾಖೆ, ಧಾರವಾಡ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾವೇರಿ ಹಾಗೂ ಮುಖ್ಯ ಇಂಜನೀಯರ್ ಪಂಚಾಯತ್ ರಾಜ್ ಇಂಜನೀಯರಿಂಗ್ ಇಲಾಖೆ, ಬೆಂಗಳೂರು ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ವಿಭಾಗದ ಭೌಗೋಳಿಕ ವಿಸ್ತೀರ್ಣವು 4848 ಚ.ಮೀ ಇರುತ್ತದೆ ಮತ್ತು 2001ರ ಜನಗಣತಿ ಪ್ರಕಾರ 1439116 ಜನ ಸಂಖ್ಯೆ ಇರುತ್ತದೆ.

ಈ ವಿಭಾಗದಡಿ ಹಾವೇರಿ, ಹಾನಗಲ್ಲ, ಹಿರೇಕೆರೂರ, ರಾಣೆಬೆನ್ನೂರ, ಬ್ಯಾಡಗಿ, ಸವಣೂರ ಮತ್ತು ಶಿಗ್ಗಾಂವ ಒಟ್ಟು 7 ಉಪ ವಿಭಾಗಗಳು ಕಾರ್ಯನಿರ್ವಹಿಸುತ್ತಿದ್ದು ಪ್ರತಿಯೊಂದು ಉಪ ವಿಭಾಗದಲ್ಲಿ ಬರುವ ಸಿಬಂಧಿ ಹಾಗೂ ತಾಂತ್ರಿಕ ಕೆಲಸಗಳಿಗೆ ಕಾರ್ಯನಿರ್ವಾಹಕ ಇಂಜನೀಯರವರೇ ಮೇಲ್ವಿಚಾರಕರಾಗಿರುತ್ತಾರೆ. ಇಲಾಖೆ ಕೆಲಸಗಳನ್ನು ದಕ್ಷತೆಯಿಂದ ನಿರ್ವಹಿಸಲು ಉಪವಿಭಾಗದವರ ಹೊಣೆ ಯಾಗಿರುತ್ತಾರೆ.

### ಕೈಪಿಡಿ–2
### ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂಧಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ

ಕಾರ್ಯನಿರ್ವಾಹಕ ಇಂಜನೀಯರ್ ಇವರು ಪಂಚಾಯತ್ ರಾಜ್ ಇಂಜನೀಯರಿಂಗ್ ವಿಭಾಗ, ಹಾವೇರಿ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ. ತಾಂತ್ರಿಕ ಶಾಖೆ, ಆಡಳಿತ ಶಾಖೆ, ಲೆಕ್ಕ ಪತ್ರ ಶಾಖೆ ಹಾಗೂ ಉಗ್ರಾಣ ಶಾಖೆ.

**1) ತಾಂತ್ರಿಕ ಶಾಖೆ:**

ಕಾರ್ಯನಿರ್ವಾಹಕ ಇಂಜನೀಯರ್ ಇವರು 7 ಉಪ ವಿಭಾಗಗಳ ಕಾರ್ಯಾಲಯಗಳ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರ ಸಹಾಯಕ್ಕಾಗಿ ಸಹಾಯಕ ಇಂಜನೀಯರ್–4 (3 ಹುದ್ದೆಗಳು ಖಾಲಿ ಇರುತ್ತವೆ), ಕಿರಿಯ ಇಂಜನೀಯರ್–5 ಹಾಗೂ ಡಿ.ಎಂ–1 ಕಾರ್ಯನಿರ್ವಹಿಸುತ್ತಾರೆ.

1) ಈ ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರು ಸರಬರಾಜು ಒದಗಿಸುವುದು/ ಪರಿವೀಕ್ಷಿಸುವುದು ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.
2) ಅಂದಾಜು ಪತ್ರಿಕೆಗಳನ್ನು ಹಾಗೂ ವಿನ್ಯಾಸಗಳನ್ನು ತಯಾರಿಸಿ ಉಪ ವಿಭಾಗಗಳಿಂದ ಬಂದ ಪಟ್ಟಿಗಳಿಗೆ ಆಡಳಿತಾತ್ಮಕವಾಗಿ ಅನುಮೋದನೆ ತಾಂತ್ರಿಕ ಮಂಜೂರಾತಿ ನೀಡುವುದು ಹಾಗೂ ಮೇಲಾಧಿಕಾರಿಗಳಿಂದ ಪಡೆಯುವುದು.
3) ವಿವಿಧ ಯೋಜನೆಗಳ ಅನುಷ್ಠಾನ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
4) ಎಂ.ಎಂ.ಆರ್,ಕೆ.ಡಿ.ಪಿ. ಹಾಗೂ ಜಿಲ್ಲಾ ಪಂಚಾಯತ ಸಾಮಾನ್ಯ ಸಭೆಯ ಹಾಗೂ ವಿವಿಧ ಉಪಸಮಿತಿ ಸಭೆಗಳಿಗೆ ಪ್ರಗತಿ ಪತ್ರಿಕೆಗಳನ್ನು ತಯಾರಿಸುವದು ಹಾಗೂ ಹಾಜರಾಗುವುದು.
5) ವಿವಿಧ ಯೋಜನೆಗಳ ಕಾರ್ಯಕ್ರಮಗಳ ಕ್ರಿಯಾ ಯೋಜನೆ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.
6) ಯೋಜನೆಗಳ ನಿರ್ಮಾಣದ ಉಪ ವಿಭಾಗಗಳಿಂದ ಬಂದ ಬಿಲ್ಲುಗಳನ್ನು ತಾಂತ್ರಿಕವಾಗಿ ಪರಿಶೀಲನೆ ಮಾಡುವುದು.

**2) ಆಡಳಿತ ಶಾಖೆ**

ಕಾರ್ಯನಿರ್ವಾಹಕ ಅಭಿಯಂತರರು ನಿಯಂತ್ರಣಾಧಿಕಾರಿಗಳಾಗಿದ್ದು, ಮಂಜೂರಾಗಿರುವ 52 ಹುದ್ದೆಗಳಲ್ಲಿ ಅಧಿಕಾರಿ ಹಾಗೂ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಇವರಲ್ಲಿ A ವರ್ಗದಲ್ಲಿ–1, B ವರ್ಗದಲ್ಲಿ–5, C ವರ್ಗದಲ್ಲಿ–34 ಹಾಗೂ D ವರ್ಗದಲ್ಲಿ–12 ಸಿಬ್ಬಂಧಿಗಳು ಇರುತ್ತಾರೆ. ಒಟ್ಟು 52 ಮಂಜೂರಾದ ಹುದ್ದೆಗಳ ಪೈಕಿ B ವರ್ಗದಲ್ಲಿ–3, ಸಿ–11 ಹಾಗೂ ಡಿ–4 ಹುದ್ದೆಗಳು ಖಾಲಿ ಇರುತ್ತವೆ.

ಅಧೀಕ್ಷಕರು ಆಡಳಿತ ಶಾಖೆಯ ಮೇಲ್ವಿಚಾರಣೆ ಸಿಬ್ಬಂದಿಯಾಗಿದ್ದು, ಸೇವಾ ವಿವರಗಳು ಭವಿಷ್ಯ ನಿಧಿ ದಾಖಲೆಗಳನ್ನು ನಿರ್ಮಿಸುವುದು, ವಿಚಾರಣೆ, ವಿದ್ಯುತ್ ಶಕ್ತಿ ದೂರವಾಣಿ ಹಾಗೂ ವೇತನ ಬಿಲ್ಲುಗಳ ತಯಾರಿಸಿ ಮೇಲ್ವಿಚಾರಣೆ ನಡೆಸುವುದು.

ಅ) ಪ್ರಥಮ ದರ್ಜೆ ಸಹಾಯಕರು– ಖಾಲಿ

ಆ) ಶೀಘ್ರಲಿಪಿಕಾರರು–1 ಸಿಬ್ಬಂದಿ ಶಾಖೆಗೆ ಒಳಪಟ್ಟ ಎಲ್ಲ ಪ್ರಗತಿ ಪತ್ರಿಕೆ ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು ಹಾಗೂ ಜಿಲ್ಲಾ ಪಂಚಾಯತದಲ್ಲಿ ಜರುಗಲಿರುವ ಎಲ್ಲ ಸಭೆಯ ನಡುವಳಿಗಳನ್ನು ದಾಖಲಿಸುವುದು.

ಇ) ದ್ವಿತೀಯ ದರ್ಜೆ ಸಹಾಯಕರು 2 ಹಾಗೂ 2 ದ್ವಿತೀಯ ದರ್ಜೆ ಸಹಾಯಕರನ್ನು (ಐಸಿಎಂ–1,ಮೆಕ್ಯಾನಿಕ್–1) ಹುದ್ದೆಗಳಲ್ಲಿ ಪರಿಗಣಿಸಲಾಗಿದೆ.

1) ವೇತನದ ಬಿಲ್ಲುಗಳನ್ನು ತಯಾರಿಸುವುದು, ಜಿಲ್ಲಾ ಖಜಾನೆಗೆ ಅನುದಾನವನ್ನು ಅಳವಡಿಸುವುದು ಹಾಗೂ ಸಿಬ್ಬಂದಿಗೆ ಸಂಬಂಧಪಟ್ಟ ಎಲ್ಲ ಪತ್ರವ್ಯವಹಾರ ಹಾಗೂ ಆಯವ್ಯಯ ತಯಾರಿಸುವುದು.
2) ಸೇವಾ ಪುಸ್ತಕಗಳ ನಿರ್ವಹಣೆ ಹಾಗೂ ಮಾಹಿತಿ ಹಕ್ಕು ಅಧಿನಿಯಮ ಸಂಕಲನ ನಿರ್ವಹಿಸುವುದು.
3) ಅಭಿಲೇಖಾಯ ಕೊಠಡಿ/ ಹಾಗೂ ಅವಕ ಸಂಕಲನ
4) ಜಾವಕ ಸಂಕಲನ ನಿರ್ವಹಿಸುವುದು
5) ಆವಕ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ ಪಿಂಚಣಿ, ರಜೆ ವಗೈರಿಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವುದು ಮತ್ತು ನಿರ್ವಹಿಸುವುದು.
6) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ದಪಡಿಸುವುದು ಮತ್ತು ಸಂಬಂಧ ಪಟ್ಟಂತೆ ಅನುದಾನ ವಗೈರೆಗಳನ್ನು ನಿರ್ವಹಿಸುವುದು.

**3) ಲೆಕ್ಕ ಪತ್ರ ಶಾಖೆ :**

1) ಲೆಕ್ಕ ಪತ್ರ ಶಾಖೆಯಲ್ಲಿ ಮಂಜೂರಾಗಿರುವ ಲೆಕ್ಕ ಪರಿಶೋಧನಾಧಿಕಾರಿ 1 (ಒಂದು) ಹುದ್ದೆ, ಪ್ರ.ದ.ಲೆ. ಸಹಾಯಕರ 3 ಹುದ್ದೆ, ದ್ವಿ.ದ.ಲೆ ಸಹಾಯಕರ 3 ಹುದ್ದೆ, ಹೀಗೆ 7 ಹುದ್ದೆಗಳಿರುತ್ತವೆ.

1) ಲೆಕ್ಕ ಪರಿಶೋಧನಾಧಿಕಾರಿಗಳು ಲೆಕ್ಕ ಪತ್ರ ಶಾಖೆಯ ಮೇಲ್ವಿಚಾರಕರು ಹಾಗೂ ಕಛೇರಿ ಮುಖ್ಯಸ್ಥರಾದ ಕಾರ್ಯನಿರ್ವಾಹಕ ಇಂಜನೀಯರರಿಗೆ ಹಣಕಾಸು ಹಾಗೂ ಲೆಕ್ಕ ಪತ್ರದ ಬಗ್ಗೆ ಆರ್ಥಿಕ ಸಲಹೆಗಾರರು ಮತ್ತು ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಅಧೀನದ ಉಪವಿಭಾಗಗಳಿಗೆ ಅನುದಾನ ಹಂಚಿಕೆ ವೆಚ್ಚದ ಮತ್ತು ಹಣದುರುಪಯೋಗವಾಗದಂತೆ ಎಚ್ಚರಿಕೆ ವಹಿಸುವುದು.
2) ಲೆಕ್ಕ ಪರಿಶೋಧನಾಧಿಕಾರಿ ಇವರು ಎಲ್ಲಾ ಯೋಜನೆಗಳ ಮಂಜೂರಾದ ಕ್ರಿಯಾ ಯೋಜನೆ ಅಂದಾಜು ಮೊತ್ತ ನಿಗಧಿತ ಅನುದಾನ, ಅನುದಾನಕ್ಕನುಗುಣವಾಗಿ ಬಿಡುಗಡೆಯಾದಂತಹ ಹಣವಿನಿಯೋಗವನ್ನು ಕಾಮಗಾರಿವಾರು ಪರಿಶೀಲನೆ ಮಾಡುವುದು.
3) ಮಂಜೂರಾದ ಕ್ರಿಯಾಯೋಜನೆ ಕ್ರಿಯಾಯೋಜನೆ ಪ್ರಕಾರ ಕರೆಯಲಾದ ಟೆಂಡರ ಕಾಮಗಾರಿಗಳ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಕಾರ್ಯಾದೇಶ ಅರ್ಜಿ ನೀಡುವ ಮೇಲ್ವಿಚಾರಣೆ.

4) ಮಹಾಲೇಖಪಾಲರ ವಾರ್ಷಿಕ ಲೆಕ್ಕ ತಪಾಸಣೆಯ ಎ.ಜಿ ಪ್ಯಾರಾ ಮತ್ತು ರಿಜಾಯಿಂಡರ್ಸ್‌ಗಳಿಗೆ ಹಾಗೂ ಜಿಲ್ಲಾ ಪಂಚಾಯತದವರು ನಡೆಸುವ ಆಂತರಿಕ ಲೆಕ್ಕ ಪರಿಶೋಧನೆಗಳಿಗೆ ಅನುಪಾಲನಾ ವರದಿ ತಯಾರಿಸುವುದು.

2) ಪ್ರ.ದ.ಲೆ.ಸ 3 ದ್ವಿ.ದ.ಸ 3 ಹುದ್ದೆಗಳಿದ್ದು ಸದರ ಹುದ್ದೆಯಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳು ಲೆಕ್ಕ ಶಾಖೆಯ ಮುಖ್ಯಸ್ಥರಾದ ಲೆಕ್ಕ ಪರಿಶೋಧನಾಧಿಕಾರಿ ಇವರ ಅಧೀನದಲ್ಲಿ ಕಾರ್ಯ ನಿರ್ವಹಿಸುವುದು.

1) ಪ್ರ.ದ.ಲೆ.ಸ ಮತ್ತು ದ್ವಿ.ದ.ಲೆ.ಸ ಇವರು ಈ ವಿಭಾಗದ ಅಧೀನದಲ್ಲಿ ಬರುವ ಉಪವಿಭಾಗವಾರು ವಿಷಯ ನಿರ್ವಾಹಕರಾಗಿ ಕಾರ್ಯನಿರ್ವಹಿಸುವುದು .

2) ಉಪವಿಭಾಗದಿಂದ ಬರುವ ಎಲ್ಲಾ ಯೋಜನೆಗಳ ಕಾಮಗಾರಿ ಬಿಲ್ಲುಗಳನ್ನು ಮಂಜೂರಾದ ಕ್ರಿಯಾಯೋಜನೆ ಪ್ರಕಾರ ತಯಾರಿಸಿದ ಗುತ್ತಿಗೆ ಕರಾರು ಪತ್ರದಲ್ಲಿ ನಮೂದಿಸಿದ ಗುತ್ತಿಗೆ ದರಗಳೊಂದಿಗೆ ಪರಿಶೀಲಿಸಿ ನಿಗಧಿತ ಅನುದಾನದೊಳಗೆ ಬಿಲ್ಲುಗಳನ್ನು ತಯಾರಿಸಿ ಗುತ್ತಿಗೆದಾರರಿಂದ ಇಲಾಖೆಗೆ ಬರಬೇಕಾದ ಇಲಾಖಾ ಕಟಾವಣೆಗಳನ್ನು ಕಡಿತಗೊಳಿಸಿ ಪಾವತಿಗೆ ಶಾಖಾ ಮುಖ್ಯಸ್ಥರ ಮೂಲಕ ಕಛೇರಿ ಮುಖ್ಯಸ್ಥರಿಗೆ ಮಂಡಿಸುವುದು.

3) ಕಾಮಗಾರಿ ಬಿಲ್ಲುಗಳ ಪಾವತಿ ತರುವಾಯ ಲೆಕ್ಕ ಶೀರ್ಷಿಕೆವಾರು ಮತ್ತು ಕಾಮಗಾರಿವಾರು ವರ್ಕ ಅಬಸ್ಟ್ರಾಕ್ಟ್ ತಯಾರಿಸಿ ಮಾಸಿಕ ಲೆಕ್ಕ ಪತ್ರ ಗ್ರ್ಯಾಂಟ್ & ಔಟಲೇಯೊಂದಿಗೆ ಪ್ರಗತಿ ಪತ್ರವನ್ನು ತಯಾರಿಸಿ ಜಿಲ್ಲಾ ಪಂಚಾಯತ ಮತ್ತು ಮುಖ್ಯ ಇಂಜನೀಯರರು, ಅಧೀಕ್ಷಕ ಇಂಜನೀಯರರಿಗೆ ಶಾಖಾ ಮುಖ್ಯಸ್ಥರು ಮತ್ತು ಕಛೇರಿ ಮುಖ್ಯಸ್ಥರ ಮೂಲಕ ಮುಂದಿನ ಕ್ರಮಕ್ಕೆ ಸಲ್ಲಿಸುವುದು.

4) ಈ ವಿಭಾಗದಲ್ಲಿ ನಿರ್ವಹಿಸುವ ಎಲ್ಲಾ ಲೆಕ್ಕ ಶೀರ್ಷಿಕೆ ಯೋಜನೆ / ಯೋಜನೆಯೇತರ ಕಾಮಗಾರಿಗಳಿಗೆ ಸಂಬಂಧಿಸಿದಂತೆ 'ಕಾಮಗಾರಿ ವಹಿಗಳನ್ನು ನಿರ್ವಹಿಸಿ ಮಾಸಿಕ ಲೆಕ್ಕ ಪತ್ರಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದು.

5) ಈ ವಿಭಾಗದ ಅಧೀನದ ಉಪವಿಭಾಗಗಳಲ್ಲಿ ಕಾಮಗಾರಿ ನಿರ್ವಹಿಸುವ ಗುತ್ತಿಗೆದಾರರ ಯಾದಿ ಪ್ರಕಾರ ಕಂಟ್ರಾಕ್ಟರ್ ಲೆಡ್ಜರ್ ನಿರ್ವಹಿಸುವುದು.

6) ವಿಭಾಗದಲ್ಲಿ ಮಿಸ್‌ಲೇನಿಯಿಸ್ ಮತ್ತು ಮೆಟೇರಿಯಲ್ ಖರೀದಿಗೆ ಸಂಬಂಧಿಸಿದಂತೆ ಎಂ.ಪಿ.ಡಬ್ಲ್ಯೂ.ಎ ವಹಿ ನಿರ್ವಹಿಸುವುದು.

7) ಗುತ್ತಿಗೆದಾರರು ಕಾಮಗಾರಿಗೆ ನೀಡಿದ ಬ್ಯಾಂಕ ಗ್ಯಾರಂಟಿ ಮೋಬಲೈಜೇಷನ್ ಮುಂಗಡ ಪಾವತಿ, ಇ.ಎಂ.ಡಿ, ಭದ್ರತಾ ಠೇವಣಿ ಮೊತ್ತ, ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರ, ಮತ್ತು ಗುತ್ತಿಗೆದಾರರ ಬಿಲ್ಲುಗಳಲ್ಲಿ ಕಟಾಯಿಸಿದ ಗುಣನಿಯಂತ್ರಣ ಉಪವಿಭಾಗದವರು ಕಟಾಯಸಲು ತಿಳಿಸಿದ ಪ್ರಯೋಗಾಲಯದ ಪ್ರಮಾಣ ಪತ್ರದ ಶಿಲ್ಕು ಹೀಗೆ ಇನ್ನು ಅವಶ್ಯವಾದ ವಹಿಗಳನ್ನು ತಯಾರಿಸುವುದು.

8) ಲೆಕ್ಕ ಶಾಖೆಯಲ್ಲಿ ಎಲ್ಲಾ ಯೋಜನೆಗಳ ನಗದು ಪುಸ್ತಕಗಳನ್ನು ಆಯಾ ಲೆಕ್ಕ ಶೀರ್ಷಿಕೆವಾರು ತಯಾರಿಸಿ ಸರ್ಕಾರದಿಂದ ಜಿಲ್ಲಾ ಪಂಚಾಯತದಿಂದ ಮತ್ತು ಇತರೆ ಇಲಾಖೆಗಳಿಂದ ಸ್ವೀಕರಿಸಿದ ಅನುದಾನಗಳನ್ನು ಸ್ವೀಕೃತಿ ಪಡೆದು ಖಜಾನೆ ಮೂಲಕ ಪಾವತಿಯಾದ ಪ್ರತಿಯೊಂದು ಪಾವತಿ ಹೋಚರಗಳನ್ನು ನಗದು ಪುಸ್ತಕದಲ್ಲಿ ಬರೆದು ಖಜಾನೆಯ 62(ಬಿ) ನೊಂದಿಗೆ ತಾಳೆಮಾಡಿ ಮಾಸಿಕ ಲೆಕ್ಕ ಪತ್ರಗಳೊಂದಿಗೆ ಹೊಂದಾಣಿಕೆ ಮಾಡಿ ಲೆಕ್ಕ ಪತ್ರ ತಯಾರಿಸುವುದು.

9) ಗುತ್ತಿಗೆದಾರರ ಬಿಲ್ಲಿನಲ್ಲಿ ಕಟಾಯಿಸಿದ ಆದಾಯ ತೆರಿಗೆ ಮತ್ತು ಮೌಲ್ಯವರ್ಧಿತ ತೆರಿಗೆ (ಮಾರಾಟ)ಗೆ ಸಂಬಂಧಿಸಿದಂತೆ ವಹಿ ತಯಾರಿಸುವುದು ಮತ್ತು ಗುತ್ತಿಗೆದಾರರಿಗೆ ಆದಾಯ ತೆರಿಗೆ ನಮೂನೆ 16 ಎ ಮತ್ತು ಮೌಲ್ಯವರ್ಧಿತ ತೆರಿಗೆ ನಮೂನೆ 156ರಲ್ಲಿ ರಿಟರ್ನ್ ನೀಡುವುದು ಹಾಗೂ ಶಾಖಾ ಮುಖ್ಯಸ್ಥರು ಮತ್ತು ಕಛೇರಿ ಮುಖ್ಯಸ್ಥರು ವಹಿಸಿದ ಇತರೆ ಕಾರ್ಯಗಳನ್ನು ನಿರ್ವಹಿಸುವುದು.

**4) ಉಗ್ರಾಣ ಶಾಖೆ :**

ಉಗ್ರಾಣ ಶಾಖೆಯಲ್ಲಿ ಒಬ್ಬ ದ್ವಿ.ದ.ಸ ಕೆಲಸ ನಿರ್ವಹಿಸುತ್ತಿದ್ದು ಕಾರ್ಯಾಲಯದ ದಾಸ್ತಾನು ಸಾಮಗ್ರಿ ಯಂತ್ರೋಪಕರಣ ಖರೀದಿ ಮತ್ತು ನಿರ್ವಹಣೆ ಹಾಗೂ ಅವಶ್ಯವಿರುವ ಸಾಮಗ್ರಿಗಳನ್ನು ಖರೀದಿಸುವುದು ಹಾಗೂ ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿ ಸಲ್ಲಿಸುವುದು ಉಗ್ರಾಣಕ್ಕೆ ಸಂಬಂಧಪಟ್ಟ ಎಲ್ಲ ಪತ್ರ ವ್ಯವಹಾರ ಹಾಗೂ ಮೇಲಾಧಿಕಾರಿಗಳಿಗೆ ಮಾಹಿತಿಯನ್ನು ಒದಗಿಸುವುದು.

**ಕೈಪಿಡಿ –3**

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ**

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ.
2) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.
3) ಭೂ ಸ್ವಾಧೀನ ಕಾಯ್ದೆ
4) ಉಗ್ರಾಣ ಕೈಪಿಡಿ
5) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ಆಡಳಿತವನ್ನು ನಿರ್ವಹಿಸಲು**

1) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು
2) ಕರ್ನಾಟಕ ಆರ್ಥಿಕ ಸಂಹಿತೆ
3) ಕರ್ನಾಟಕ ಖಜಾನಾ ಸಂಹಿತೆ
4) ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು ಇವುಗಳನ್ನು ಅನುಸರಿಸಲಾಗುತ್ತಿದೆ.

**ಕೈಪಿಡಿ–4**

ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯೂ–1/ಎಫ್‌ಸಿಆರ್ 93/ಬೆಂಗಳೂರು ದಿನಾಂಕ:15.12.1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–1/ಟಿಎಫ್‌ಪಿ 2001 ಬೆಂಗಳೂರು ದಿನಾಂಕ:02.02.2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ

**ಕೈಪಿಡಿ–5**

ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ.

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು
ಕರ್ನಾಟಕ ನಾಗರೀಕ ಸೇವಾನಿಯಮಗಳು
ಕರ್ನಾಟಕ ಸರ್ಕಾರಿ (ವರ್ಗೀಕರಣ,ನಿಯಂತ್ರಣ ಮತ್ತು ಅಪೀಲು ನಿಯಮಗಳು)
ಕರ್ನಾಟಕ ಆರ್ಥಿಕ ಸಂಹಿತೆ
ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000
ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.
ಭೂಸ್ವಾಧೀನ ಕಾಯ್ದೆ
ಉಗ್ರಾಣ ಕೈಪಿಡಿ
ಮಧ್ಯಸ್ಥಿಕೆ ಕಾಯ್ದೆ 1996
ಕರ್ನಾಟಕ ನೀರಾವರಿ ಕಾಯ್ದೆ 1965
ಸಾದಿಲ್ವಾರು ವೆಚ್ಚದ ಕೈಪಿಡಿ
ಕರ್ನಾಟಕ ಖಜಾನೆ ಸಂಹಿತೆ
ಚಾಲ್ತಿ ದರಪಟ್ಟಿ
ಬಜೆಟ್ ಕೈಪಿಡಿ

**ಕೈಪಿಡಿ–6**

**ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ**

**ತಾಂತ್ರಿಕ ಶಾಖೆ:**

1) ವಿಭಾಗ ಮಟ್ಟದಲ್ಲಿ ಹಾಗೂ ಅಧೀಕ್ಷಕ ಇಂಜನೀಯರವರ, ಮುಖ್ಯ ಇಂಜನೀಯರವರ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಇವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳ ತಾಂತ್ರಿಕ ಪರಿಶೀಲನೆ ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು ಹಾಗೂ ಆಡಳಿತಾತ್ಮಕ ಅನುಮೋದನೆ ಪಡೆಯುವುದು.
2) ಪ್ರಗತಿಯ ವರದಿಗಳು.
3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ.
5) ಪಿ.ಆರ್.ಇ.ಡಿ ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟ್‌ಗಳ ವಹಿ.
6) ದರ ಸೂಚಿಕ.
7) ಆಯವ್ಯಯ ಕಾಮಗಾರಿಗಳ ವಹಿ.

**ರಿಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಿಜಿಸ್ಟರ್.
2) ಸೇತುವೆಗಳ ರಿಜಿಸ್ಟರ್.
3) ಕಟ್ಟಡಗಳ ರಿಜಿಸ್ಟರ್.
4) ಮಂಜೂರಾದ ಅಂದಾಜು ಪತ್ರಿಕೆಗಳ ರಿಜಿಸ್ಟರ್.

**ದಾಖಲೆಗಳು : ಆಡಳಿತ ಶಾಖೆ**

ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1) ಹಾಜರಾತಿ ವಹಿ
2) ಪತ್ರಾಂಕಿತ/ ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ & ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ
3) ಸಂಘಟನಾ ನಕ್ಷೆ
4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಃಖ್ತೆ
5) ಕೆಲಸ ವಿತರಣಾ ತಃಖ್ತೆ
6) ವೇತನ ಬಡ್ತಿಯ ನಿಗಾ ವಹಿ
7) ವೇತನ ಬಡ್ತಿಯ ಮಂಜೂರಾತಿ ವಹಿ
8) ಇನ್‌ಕಂಬೆನ್ಸಿ ವಹಿ
9) ರಹಸ್ಯ ವರದಿಗಳ ವಹಿ
10) ಆಸ್ತಿ ಮತ್ತು ದಾಜಿಜತ್ವ ತಃಖ್ತೆ ವಹಿ
11) ಮಹಾಲೇಖಾಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತ ವೇತನ ಪತ್ರಗಳ ನಿಗಾವಹಿ
12) ಸೇವಾ ವಹಿ
13) ಇಲಾಖಾ ಪರೀಕ್ಷೆಗಳ ನಿಗಾ ವಹಿ
14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ
15) ಕಛೇರಿ ನೌಕರರ ಮನೆಗಳ ವಿಳಾಸ
16) ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ (LAQ&LCQ)
17) ವೈಯಕ್ತಿಕ ವಹಿ
18) ಪ್ರತಿ ಮಾಹೆಗಳ ಬಾಕಿ ಪಟ್ಟಿ
19) ಸ್ಟಾಂಪುವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಃಖ್ತೆ
20) ಸಾಮಾನ್ಯ ಸ್ವೀಕೃತಿ ವಹಿ
21) ರವಾನೆ ವಹಿ
22) ಸ್ಥಳೀಯ ವಿತರಣಾ ರವಾನೆ
23) ಕಛೇರಿ ಆದೇಶ ಪುಸ್ತಕ
24) ಸಾಮಾನ್ಯ ನಗದು ಪುಸ್ತಕ
25) ವೇತನ ಬಟವಾಡೆ ವಹಿ
26) ಪ್ರಯಾಣ ಭತ್ಯೆ ಬಟವಾಡೆ ವಹಿ
27) ಸಾದಿಲ್ವಾರು ವೆಚ್ಚ ವಹಿ ವೋಚರ್‌ಗಳ ಸಂಹಿತೆ

**ಲೆಕ್ಕಪತ್ರ ಶಾಖೆ:**

1) ನಗದು ಪುಸ್ತಕ
2) ಚೆಕ್ ಮೆಮೋ ಪುಸ್ತಕ
3) ಎಲ್.ಓ.ಸಿ.ರಿಜಿಸ್ಟರ್
4) ರೆಮಿಟೆನ್ಸಿ ರಿಜಿಸ್ಟರ್

5) ಚೆಕ್ ರಿಸೀವ್ಡ್ ರಿಜಿಸ್ಟರ್
6) ಎಸ್.ಬಿ.ಆರ್. ರಿಜಿಸ್ಟರ್
7) ಖಾಲಿ ಅಳತೆ ಪುಸ್ತಕಗಳ ವಹಿ
8) ಎಂ.ಪಿ.ಡಬ್ಲ್ಯು ರಿಜಿಸ್ಟರ್
9) ಟಿ.ಇ.ಓ.ರಿಜಿಸ್ಟರ್
10) ವರ್ಕ್ಸ್ ರಿಜಿಸ್ಟರ್
11) ನಮೂನೆ–81
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ

**ಉಗ್ರಾಣ ಶಾಖೆ**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯುಎ–4)
2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯುಎ–4)
3) ದಾಸ್ತಾನು ಖರೀದಿ ಪುಸ್ತಕ
4) ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯುಎ–15)
5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರೆಲ್‌ಗಳ ವಹಿ(ಎಸ್‌ಎಂಜಿ–7)
6) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯುಎ–28)
7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ
8) ಕಛೇರಿ ಪೀಠೋಪಕರಣಗಳ ವಹಿ (ಕೆಎಫ್‌ಸಿ–34ಎ)
9) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯುಎ–4)
10) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯುಎ–4)
11) ಸೆಪ್ಟೆಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರ ಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯುಜಿ–17)
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯುಜಿ–17) ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕರಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

––– ಏನೂ ಇರುವುದಿಲ್ಲ –––

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ/ಪರಿಷತ್ತು/ಸಮಿತಿ ಮತ್ತು ಇತರೆ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಕೆಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

––– ಏನೂ ಇರುವುದಿಲ್ಲ –––

**ಕೈಪಿಡಿ–9**

ಇಲಾಖೆಯ ಅಧಿಕಾರ ಮತ್ತು ಸಿಬ್ಬಂಧಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಕೈಪಿಡಿ–2ರಲ್ಲಿ ಈಗಾಗಲೇ ತಿಳಿಸಲಾದಂತೆ ಯಾವತ್ತೂ ಎಲ್ಲ ವರ್ಗದ ಸಿಬ್ಬಂಧಿಯವರ ವಿವರ.

| ಅ. ನಂ. | ಹುದ್ದೆ | ಹೆಸರು |
|---|---|---|
| 1. | ಕಾರ್ಯನಿರ್ವಾಹಕ ಇಂಜಿನೀಯರ್ –1 | ಶ್ರೀ ಜಿ.ಬಿ.ಕಾಮಟೆ |
| 2. | ಸಹಾಯಕ ಇಂಜಿನೀಯರ್–4 | ಶ್ರೀ ಎಂ.ಟಿ.ಮಂಜುನಾಥ |
| | | ಖಾಲಿ |
| | | ಖಾಲಿ |
| | | ಖಾಲಿ |
| 3. | ಕಿರಿಯ ಇಂಜಿನೀಯರ್–5 | ಶ್ರೀ ಸಿ.ಬಿ.ಕೋಕಾಟೆ |
| | | ಶ್ರೀ ಹೆಮರಾಜ್.ಕೆ |
| | | ಶ್ರೀ ಮಂಜನಗೌಡ.ಪರಪ್ಪಗೌಡರ |

| ಅ. ನಂ. | ಹುದ್ದೆ | ಹೆಸರು |
|---|---|---|
| | | ಶ್ರೀ ಹನುಮಂತ ಮಾದರ (ನಿಯೋಜನೆ ಮೇರೆಗೆ ಉ.ವಿ ಹಿರೇಕೆರೂರ) |
| | | ಶ್ರೀ ಎಸ್.ಪ್ರಭಾಕರ(ಅಮಾನತ್ತಿನಲ್ಲಿದ್ದಾರೆ) |
| 4. | ಲೆಕ್ಕಪರಿಶೋಧಕರು–1 | ಶ್ರೀ ಬಿ.ಎಂ.ಕೃಷ್ಣಪ್ಪ |
| 5. | ಕಛೇರಿ ಅಧೀಕ್ಷಕರು–1 | ಶ್ರೀ ಪಿ.ಬಿ.ಪಾಟೀಲ್ |
| 6. | ಪ್ರಥಮ ದರ್ಜೆ ಸಹಾಯಕರು–1 | ಖಾಲಿ |
| 7. | ಪ್ರಥಮ ಭೂಮಾಪಕರು–1 | ಖಾಲಿ |
| 8. | ಸಾಂಖಿಕ ನಿರೀಕ್ಷಕರು–1 | ಖಾಲಿ |
| 9. | ಪ್ರಥಮ ದರ್ಜೆ ಉಗ್ರಾಣ ಪಾಲಕರು–1 | ಖಾಲಿ |
| 10. | ಶೀಘ್ರಲಿಪಿಗಾರರು–1 | ಶ್ರೀ ಆರ್.ಎಲ್.ಬಾಳಪ್ಪಗೋಳ |
| 11. | ಆಕೃತಿ ರಚನಾಕಾರರು–1 | ಶ್ರೀ ಐ.ಎಚ್.ರವಡೂರ |
| 12. | ಪ್ರಥಮ ದರ್ಜೆ ಲೆಕ್ಕ ಪತ್ರ ಸಹಾಯಕರು–3 | ಶ್ರೀ ಎಂ.ಕೆ.ಸೀನಪ್ಪ |
| | | ಶ್ರೀ ಜಿ.ಬಿ.ಕುಂಬಾರ |
| | | ಶ್ರೀ ಎನ್.ಎಚ್.ಜಂಗಳಿ |
| 13. | ದ್ವಿತೀಯ ದರ್ಜೆ ಸಹಾಯಕರು–2 | ಶ್ರೀ ಜಿ.ಆರ್.ಕಡಕೋಳ |
| | | ಶ್ರೀ ಸಿ.ಆರ್.ಭೋವಿ |
| 14. | ದ್ವಿತೀಯ ದರ್ಜೆ ಲೆಕ್ಕ ಪತ್ರ ಸಹಾಯಕರು–3 | ಶ್ರೀ ಬಿ.ಆರ್.ಲಮಾಣಿ |
| | | ಶ್ರೀ ಎನ್.ಬಿ.ಪಾಟೀಲ್ |
| | | ಖಾಲಿ |
| 15. | ಬೆರಳಚ್ಚುಗಾರರು–2 | ಶ್ರೀಮತಿ ಎನ್.ಜಿ.ಬೆಂಗಳೂರ |
| | | ಶ್ರೀಮತಿ ಪಿ.ಜೆ.ಬೋಗಾರ (ನಿಯೋಜನೆ ಮೇರೆಗೆ ಯೋಜನಾ ಉ.ವಿ ಹಾವೇರಿ) |
| 16. | ವಾಹನ ಚಾಲಕರು–2 | ಶ್ರೀ ಕೆ.ಎನ್.ದೊಡ್ಡಗೌಡರ |
| | | ಶ್ರೀ ಎನ್.ಎಂ.ಬಿಜಾಪೂರ (ನಿಯೋಜನೆ ಮೇರೆಗೆ ತಾ.ಪಂ ಹಾವೇರಿ) |
| 17. | ಐ.ಸಿ.ಎಂ–5 | ಶ್ರೀ ಆರ್.ಎಂ.ಅಮ್ಮಿನಭಾವಿ (ನಿಯೋಜನೆ ಮೇರೆಗೆ ಉ.ವಿ ಹಾವೇರಿ) |
| | | ಶ್ರೀ ಜೆ.ಪಿ.ದೇಶಪಾಂಡೆ |
| | | ಖಾಲಿ |
| | | ಖಾಲಿ |
| | | ಖಾಲಿ |
| 18. | ಮೆಕ್ಯಾನಿಕ್–5 | ಶ್ರೀ ಎಸ್.ಡಿ.ಬಂಡಿವಡ್ಡರ (ನಿಯೋಜನೆ ಮೇರೆಗೆ ಉ.ವಿ ಹಾವೇರಿ) |
| | | ಶ್ರೀ ಎಂ.ಪಿ.ನದಾಫ್ (ನಿಯೋಜನೆ ಮೇರೆಗೆ ಉ.ವಿ ಹಾವೇರಿ) |
| | | ಶ್ರೀ ಎ.ಐ.ಮುಲ್ಲಾ |
| | | ಖಾಲಿ |
| | | ಖಾಲಿ |

| ಅ. ನಂ. | ಹುದ್ದೆ | ಹೆಸರು |
|---|---|---|
| 19. | ಜವಾನರು–4 | ಶ್ರೀ ಎಂ.ಎಂ.ಅಗಡಿ |
| | | ಶ್ರೀಮತಿ ಎಸ್.ಎಸ್.ಹಿರೇಮಠ |
| | | ಶ್ರೀಮತಿ ಆರ್.ಎಸ್.ತಳವಾರ |
| | | ಖಾಲಿ |
| 20. | ಚೌಕಿದಾರ–2 | ಶ್ರೀ ಜಿ.ಬಿ.ಹಿರೇಮಠ (ನಿಯೋಜನೆ ಮೇರೆಗೆ ಜಿ.ಪಂ ಹಾವೇರಿ) |
| | | ಶ್ರೀಮತಿ ಎನ್.ಎಂ.ದುಕಾನದಾರ |
| 21. | ಕಾವಲುಗಾರ–2 | ಶ್ರೀ ಎ.ಎಂ.ಹುಬ್ಬಳ್ಳಿ |
| | | ಖಾಲಿ |
| 22. | ನಾಯಕ–1 | ಶ್ರೀ ಎಂ.ಆರ್.ನದಾಫ್ (ನಿಯೋಜನೆ ಮೇರೆಗೆ ಉ.ವಿ ರಾಣೆಬೆನ್ನೂರ) |
| 23. | ಆಯಿಲ್ ಮನ್–1 | ಖಾಲಿ |
| 24. | ಪೀಟ್ಟರ್–1 | ಶ್ರೀ ಆರ್.ಬಿ.ಗಾಜೇರ್ (ನಿಯೋಜನೆ ಮೇರೆಗೆ ಉ.ವಿ ಬ್ಯಾಡಗಿ) |

**ಕೈಪಿಡಿ–10**

**ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು**

ಕಾರ್ಯನಿರ್ವಾಹಕ ಇಂಜಿನೀಯರರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತದೆ.

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಕಾರ್ಯನಿರ್ವಾಹಕ ಇಂಜಿನೀಯರ್ –1 | ಶ್ರೀ ಜಿ.ಬಿ.ಕಾಮಟೆ | 18150–26925 | 26925 |
| 2. | ಸಹಾಯಕ ಇಂಜಿನೀಯರ್–4 | ಶ್ರೀ ಎಂ.ಟಿ.ಮಂಜುನಾಥ | 11400–21600 | 24450 |
| | | ಖಾಲಿ | 11400–21600 | – |
| | | ಖಾಲಿ | 11400–21600 | – |
| | | ಖಾಲಿ | 11400–21600 | – |
| 3. | ಕಿರಿಯ ಇಂಜಿನೀಯರ್–5 | ಶ್ರೀ ಸಿ.ಬಿ.ಕೋಕಾಟೆ | 11400–21600 | 14800 |
| | | ಶ್ರೀ ಹೆಮರಾಜ್.ಕೆ | 8825–16000 | 9050 |
| | | ಶ್ರೀ ಮಂಜನಗೌಡ.ಪರಪ್ಪಗೌಡರ | 8825–16000 | 9050 |
| | | ಶ್ರೀ ಹನುಮಂತ ಮಾದರ | 8825–16000 | 9275 |
| | | ಶ್ರೀ ಎಸ್.ಪ್ರಭಾಕರ್ | 8825–16000 | 16000 |
| 4. | ಲೆಕ್ಕಪರಿಶೋಧಕರು–1 | ಶ್ರೀ ಬಿ.ಎಂ.ಕೃಷ್ಣಪ್ಪ | 11400–21600 | 14400 |
| 5. | ಕಛೇರಿ ಅಧೀಕ್ಷಕರು–1 | ಶ್ರೀ ಪಿ.ಬಿ.ಪಾಟೀಲ್ | 10000–18150 | 12300 |
| 6. | ಪ್ರಥಮ ದರ್ಜೆ ಸಹಾಯಕರು–1 | ಖಾಲಿ | 7275–13350 | – |
| 7. | ಪ್ರಥಮ ಭೂ ಪಾಕರು–1 | ಖಾಲಿ | 7275–13350 | – |
| 8. | ಸಾಂಖಿಕ ನಿರೀಕ್ಷಕರು–1 | ಖಾಲಿ | 7275–13350 | – |
| 9. | ಪ್ರಥಮ ದರ್ಜೆ ಉಗ್ರಾಣ ಪಾಲಕರು–1 | ಖಾಲಿ | 7275–13350 | – |
| 10. | ಶೀಘ್ರಲಿಪಿಗಾರರು–1 | ಶ್ರೀ ಆರ್.ಎಲ್.ಬಾಳಪ್ಪಗೋಳ | 7275–13350 | 8600 |
| 11. | ಆಕೃತಿ ರಚನಾಕಾರರು–1 | ಶ್ರೀ ಐ.ಎಚ್.ರವಡೂರ | 8825–16000 | 16800 |

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 12. | ಪ್ರಥಮ ದರ್ಜೆ ಲೆಕ್ಕ ಪತ್ರ ಸಹಾಯಕರು–3 | ಶ್ರೀ ಎಂ.ಕೆ.ಸೀನಪ್ಪ | 7275–13350 | 11400 |
| | | ಶ್ರೀ ಜಿ.ಬಿ.ಕುಂಬಾರ | 7275–13350 | 11100 |
| | | ಶ್ರೀ ಎನ್.ಎಚ್.ಜಂಗಲಿ | 7275–13350 | 8600 |
| 13. | ದ್ವಿತೀಯ ದರ್ಜೆ ಸಹಾಯಕರು–2 | ಶ್ರೀ ಜಿ.ಆರ್.ಕಡಕೋಳ | 5800–10500 | 7100 |
| | | ಶ್ರೀ ಸಿ.ಆರ್.ಭೋವಿ | 5800–10500 | 7800 |
| 14. | ದ್ವಿತೀಯ ದರ್ಜೆ ಲೆಕ್ಕ ಪತ್ರ ಸಹಾಯಕರು–3 | ಶ್ರೀ ಬಿ.ಆರ್.ಲಮಾಣಿ | 5800–10500 | 11400 |
| | | ಶ್ರೀ ಎನ್.ಬಿ.ಪಾಟೀಲ್ | 5800–10500 | 8825 |
| | | ಖಾಲಿ | 5800–10500 | – |
| 15. | ಬೆರಳಚ್ಚುಗಾರರು–2 | ಶ್ರೀಮತಿ ಎನ್.ಜಿ.ಬೆಂಗಳೂರ | 7275–13350 | 8825 |
| | | ಶ್ರೀಮತಿ ಪಿ.ಜೆ.ಬೋಗಾರ | 7275–13350 | 9050 |
| 16. | ವಾಹನ ಚಾಲಕರು–2 | ಶ್ರೀ ಕೆ.ಎನ್.ದೊಡ್ಡಗೌಡರ | 6250–12000 | 7800 |
| | | ಶ್ರೀ ಎನ್.ಎಂ.ಬಿಜಾಪೂರ | 5800–10500 | 7275 |
| 17. | ಐ.ಸಿ.ಎಂ–5 | ಶ್ರೀ ಆರ್.ಎಂ.ಅಮ್ಮಿನಭಾವಿ | 6250–12000 | 8200 |
| | | ಶ್ರೀ ಜೆ.ಪಿ.ದೇಶಪಾಂಡೆ | 5800–10500 | 6125 |
| | | ಖಾಲಿ | 5800–10500 | – |
| | | ಖಾಲಿ | 5800–10500 | – |
| | | ಖಾಲಿ | 5800–10500 | – |
| 18. | ಮೆಕ್ಯಾನಿಕ್–5 | ಶ್ರೀ ಎಸ್.ಡಿ.ಬಂಡಿವಡ್ಡರ | 5800–10500 | 7800 |
| | | ಶ್ರೀ ಎಂ.ಪಿ.ನದಾಫ್ | 7275–13350 | 8825 |
| | | ಶ್ರೀ ಎ.ಐ.ಮುಲ್ಲಾ | 5800–10500 | 7450 |
| | | ಖಾಲಿ | 5800–10500 | – |
| | | ಖಾಲಿ | 5800–10500 | – |
| 19. | ಜವಾನರು–4 | ಶ್ರೀ ಎಂ.ಎಂ.ಅಗಡಿ | 4800–7275 | 6500 |
| | | ಶ್ರೀಮತಿ ಎಸ್.ಎಸ್.ಹಿರೇಮಠ | 4800–7275 | 6500 |
| | | ಶ್ರೀಮತಿ ಆರ್.ಎಸ್.ತಳವಾರ | 4800–7275 | 5000 |
| | | ಖಾಲಿ | 4800–7275 | – |
| 20. | ಚೌಕಿದಾರ–2 | ಶ್ರೀ ಜಿ.ಬಿ.ಹಿರೇಮಠ | 4800–7275 | 6125 |
| | | ಶ್ರೀಮತಿ ಎನ್.ಎಂ.ದುಕಾನದಾರ | 4800–7275 | 6125 |
| 21. | ಕಾವಲುಗಾರ–2 | ಶ್ರೀ ಎ.ಎಂ.ಹುಬ್ಬಳ್ಳಿ | 5500–9500 | 9500 |
| | | ಖಾಲಿ | 4800–7275 | – |
| 22. | ನಾಯಕ–1 | ಶ್ರೀ ಎಂ.ಆರ್.ನದಾಫ್ | 4800–7275 | 6125 |
| 23. | ಆಯಿಲ್ ಮನ್–1 | ಖಾಲಿ | 4800–7275 | – |
| 24. | ಪಿಟ್ಟರ್–1 | ಶ್ರೀ ಆರ್.ಬಿ.ಗಾಜೇರ್ | 4800–7275 | 7100 |

ಕೈಪಿಡಿ–11 2008–09ನೇ ಸಾಲಿನ ವಿವರ.

| ಕ್ರ. ಸಂ. | ಲೆಕ್ಕಶೀರ್ಷಿಕೆ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಒಟ್ಟು ವೆಚ್ಚ | ಬಾಕಿ ಉಳಿದ ಅನುದಾನ |
|---|---|---|---|---|---|
| 1. | 4215–01–102–9–01 ನೀರು ಸರಬರಾಜು(ರಾಜ್ಯ ವಲಯ) | 400.00 | 405.00 | 405.00 | 0.00 |
| 2. | 4215–01–102–9–01–132 (ರಾಜೀವಗಾಂಧಿ ಸಬ್ ಮೀಷನ್ (ರಾಜ್ಯ) | | 193.10 | 193.10 | 0.00 |
| 3. | 4215–01–102–9–01–132 (ಅಂತರ್ಜಲ ಅಭಿವೃದ್ಧಿ) (ರಾಜ್ಯ ) | 11.10 | 11.10 | 11.10 | 0.00 |
| | **ಒಟ್ಟು** | **411.10** | **609.20** | **609.20** | **0.00** |
| 4. | 4215–01–102–9–06 ಡಾ॥ನಂಜುಂಡಪ್ಪ ವರದಿ | 115.38 | 115.38 | 0.00 | 115.38 |
| | **ಒಟ್ಟು** | **115.38** | **115.38** | **0.00** | **115.38** |
| 5. | 4215–01–102–9–04 ನೀರು ಸರಬರಾಜು (ಕೇಂದ್ರ ವಲಯ) | 610.00 | 690.00 | 495.93 | 194.07 |
| 6. | 4215–01–102–9–04–132 (ಅಂತರ್ಜಲ ಅಭಿವೃದ್ಧಿ) (ಕೇಂದ್ರ ) | | 44.20 | 44.20 | 0.00 |
| 7. | 4215–01–102–9–04–132 (ರಾಜೀವಗಾಂಧಿ ಸಬ್ ಮೀಷನ್ (ಕೇಂದ್ರ) | | 926.90 | 678.53 | 248.37 |
| 8. | 4215–01–102–9–04–132 (ತರಬೇತಿ) | 6.24 | 6.24 | 6.24 | 0.00 |
| 9. | 4215–01–102–9–04 ಅಭಾವ ಪೀಡಿತ ಪ್ರದೇಶ | 2.20 | 2.20 | 2.20 | 0.00 |
| | **ಒಟ್ಟು** | **618.44** | **1669.54** | **1227.10** | **442.44** |
| 10. | 2059–80–053–0–01 ನಿರ್ವಹಣೆ | 20.05 | 20.05 | 20.05 | 0.00 |
| 11. | 2059–80–052–0–01 ಹೊಸ ಸರಬರಾಜು | 2.76 | 2.76 | 2.76 | 0.00 |
| | **ಒಟ್ಟು** | **22.81** | **22.81** | **22.81** | **0.00** |
| 12. | 2702–01–101–0–72 ನಿರ್ವಹಣೆ | 29.98 | 29.98 | 29.98 | 0.00 |
| 13. | 2702–80–800–0–01 ಸಮೀಕ್ಷೆ | 0.79 | 0.79 | 0.79 | 0.00 |
| 14. | 2702–80–052–2–01 ಹೊಸ ಸರಬರಾಜು | 1.83 | 1.83 | 1.83 | 0.00 |
| | **ಒಟ್ಟು** | **32.60** | **32.60** | **32.60** | **0.00** |
| 15. | 3054–80–196–1–02 ಸಿ.ಎಂ.ಜಿ.ಎಸ್.ವೈ | 555.31 | 555.13 | 555.13 | 0.00 |
| 16. | 3054–04–165–1–03 ದಿನಗೂಲಿ ನೌಕರರ ವೇತನ | 4.83 | 4.83 | 4.83 | 0.00 |
| 17. | 3054–80–196–1–02 CMGSY ಹೆಚ್ಚುವರಿ | 218.02 | 218.02 | 218.02 | 0.00 |
| | **ಒಟ್ಟು** | **778.16** | **777.98** | **777.98** | **0.00** |
| 18. | 5054–04–337–7–01 ಗ್ರಾಮೀಣ ಸಂಪರ್ಕ ರಸ್ತೆಗಳು | 524.31 | 206.00 | 206.00 | 0.00 |
| 19. | 5054–04–337–7–02 ಸೇತುವೆ ಮತ್ತು ಮೋರಿ ನಿರ್ಮಾಣ. | | 56.16 | 56.16 | 0.00 |
| 20. | 5054–04–337–7–01–132 ಗ್ರಾಮೀಣ ಸಂಪರ್ಕ ಹೆಚ್ಚುವರಿ ಅನುದಾನ (ರಾಣೇಬೆನ್ನೂರ) | 53.00 | 53.00 | 53.00 | 0.00 |
| 21. | 5054–04–337–7–01–132 ಗ್ರಾಮೀಣ ಸಂಪರ್ಕ ಹೆಚ್ಚುವರಿ ಅನುದಾನ (ಹಾವೇರಿ) | 5.00 | 5.00 | 5.00 | 0.00 |
| | **ಒಟ್ಟು** | **582.31** | **320.16** | **320.16** | **0.00** |

| ಕ್ರ. ಸಂ. | ಲೆಕ್ಕಶೀರ್ಷಿಕೆ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಒಟ್ಟು ವೆಚ್ಚ | ಬಾಕಿ ಉಳಿದ ಅನುದಾನ |
|---|---|---|---|---|---|
| 22. | 2225–03–800–0–53 ಹಿಂದುಳಿದ ವರ್ಗಗಳ (ವಿಶೇಷ) | 10.20 | 10.20 | 10.20 | 0.00 |
| 23. | 2225–03–277–2–49 ಹಿಂದುಳಿದ ವರ್ಗ (ಹನುಮನಹಳ್ಳಿ ಮುರಾಜೀ) | 6.20 | 6.20 | 6.20 | 0.00 |
| 24. | 2225–01–277–0–61 ವಸತಿ ಗೃಹಗಳ ನಿರ್ವಹಣೆ | 17.79 | 17.79 | 17.79 | 0.00 |
| | **ಒಟ್ಟು** | **34.19** | **34.19** | **34.19** | **0.00** |
| 25. | 2225–01–277–0–02 ಪ.ಜಾ./ಪ.ಪಂ. ಹಾಸ್ಟೇಲ್ ನಿರ್ಮಾಣ. | 25.33 | 25.33 | 25.33 | 0.00 |
| 26. | 4225–02–277–2–01 ಸಮಾಜ ಕಲ್ಯಾಣ ಆಶ್ರಮ ಶಾಲೆ | 5.07 | 5.07 | 5.07 | 0.00 |
| 27. | 2225–02–794–0–01 ಭಾರತ ಸಂವಿಧಾನ ಅನುಚ್ಛೇದ | 45.80 | 45.80 | 45.80 | 0.00 |
| | **ಒಟ್ಟು** | **76.20** | **76.20** | **76.20** | **0.00** |
| 28. | 4210–02–103–1–03 ಜಿಲ್ಲಾ ಆರೋಗ್ಯ ಕಛೇರಿ ಕಟ್ಟಡ | 2.03 | 2.03 | 2.03 | 0.00 |
| 29. | 2210–03–101–0–73 ಆರೋಗ್ಯ ಉಪಕೇಂದ್ರಗಳ ನಿರ್ವಹಣೆ | 25.33 | 21.06 | 21.06 | 0.00 |
| 30. | 2210–03–110–0–06 ನಬಾರ್ಡ ಆಸ್ಪತ್ರೆ ಕಟ್ಟಡ ಹರನಗಿರಿ | 34.45 | 12.98 | 12.98 | 0.00 |
| 31. | 2210–04–101–1–76 ಭಾರತೀಯ ವೈದ್ಯ ಪದ್ಧತಿ | 15.20 | 12.64 | 12.64 | 0.00 |
| | **ಒಟ್ಟು** | **77.01** | **48.71** | **48.71** | **0.00** |
| 32. | 2515–00–101–0–80 ಸಾಮರ್ಥ್ಯ ಸೌಧ | 29.00 | 29.00 | 29.00 | 0.00 |
| 33. | 2515–00–103–0–01 ಜಿ.ಪಂ.ಕಟ್ಟಡಗಳು | 35.47 | 35.47 | 3.10 | 32.37 |
| 34. | 2515–00–103–0–01 ಜಿಲ್ಲಾ ಪಂಚಾಯತ ಅಭಿವೃದ್ಧಿ ಅನುದಾನ | 10.130 | 10.13 | 10.13 | 0.00 |
| | **ಒಟ್ಟು** | **74.60** | **74.60** | **42.23** | **32.37** |
| 35. | 4403–00–101–0–02 RIDF ನಬಾರ್ಡ ಪಶು ಚಿಕಿತ್ಸಾಲಯ | 25.62 | 25.62 | 25.62 | 0.00 |
| 36. | 2403–00–101–0–61 ಪಶು ಪಾಲನೆ | 20.27 | 15.18 | 15.18 | 0.00 |
| | **ಒಟ್ಟು** | **45.89** | **40.80** | **40.80** | **0.00** |
| 37. | 2059–80–053–5–04 12ನೇ ಹಣಕಾಸು ಕಟ್ಟಡಗಳು (2007–08) | 262.34 | 118.32 | 118.32 | 0.00 |
| 38. | 2059–80–053–5–04 12ನೇ ಹಣಕಾಸು ಕಟ್ಟಡಗಳು ವಾರ್ಷಿಕ | 69.18 | | | |
| 39. | 2059–80–053–5–04 12ನೇ ಹಣಕಾಸು ಯೋಜನೆ ಕಟ್ಟಡಗಳ ದುರಸ್ತಿ & ನಿರ್ವಹಣೆ | 225.16 | | | |
| | **ಒಟ್ಟು** | **556.68** | **118.32** | **118.32** | **0.00** |

| ಕ್ರ. ಸಂ. | ಲೆಕ್ಕಶೀರ್ಷಿಕೆ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಒಟ್ಟು ವೆಚ್ಚ | ಬಾಕಿ ಉಳಿದ ಅನುದಾನ |
|---|---|---|---|---|---|
| 40. | 3034–04–337–1–79 12ನೇ ಹಣಕಾಸು ರಸ್ತೆ (07–08) | 664.77 | 664.77 | 664.77 | 0.00 |
| 41. | 4702–00–101–9–04 ಸಣ್ಣ ನೀರಾವರಿ ಕೆರೆಗಳು (ವಿಶೇಷ ಅಭಿವೃದ್ಧಿ) | 180.00 | 180.00 | 180.00 | 0.00 |
| 42. | 2202–02–800–1–10 ನಬಾರ್ಡ ಪ್ರೌಢ ಶಾಲಾ ಕಟ್ಟಡ | 166.61 | 166.61 | 165.05 | 1.56 |
| 43. | 4860–04–800–0–01 ಸಕ್ಕರೆ ಕಾರ್ಖಾನೆ ರಸ್ತೆ | 2.00 | 2.00 | 2.00 | 0.00 |
| 44. | 4215–02–800–0–02 ಸುವರ್ಣ ಗ್ರಾಮೋದಯ | | 838.07 | 838.07 | 0.00 |
| 45. | 2205–00–102–1–01 ಬಯಲು ರಂಗ ಮಂದಿರ | 2.03 | 2.03 | 2.03 | 0.00 |
| 46. | 2515–00–001–0–02 ಠೇವಣಿ | 112.65 | 112.65 | 96.35 | 16.30 |
| | **ಅಂತೂ ಒಟ್ಟು** | **4553.43** | **5906.62** | **5298.57** | **608.05** |

**ಕೈಪಿಡಿ–12**

ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ–13**

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.

ಸಾರ್ವಜನಿಕರು ಕಾರ್ಯನಿರ್ವಾಹಕ ಇಂಜನೀಯರರು, ಪಂ.ರಾ.ಇಂ ವಿಭಾಗ, ಹಾವೇರಿ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಮಾಹಿತಿ ಪಡೆಯಲು ಶ್ರೀ ಎಂ.ಟಿ.ಮಂಜುನಾಥ, ಸಹಾಯಕ ಇಂಜನೀಯರ್ ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ 958375–232454 ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ–14**

ಕಾರ್ಯನಿರ್ವಾಹಕ ಇಂಜಿನೀಯರರು, ಪಂ.ರಾ.ಇಂ. ವಿಭಾಗ, ಹಾವೇರಿ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಎಂ.ಟಿ.ಮಂಜುನಾಥ, ಸಹಾಯಕ ಇಂಜಿನೀಯರ್ ಇವರಿಗೆ ಅರ್ಜಿ ನೀಡುವುದು ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ, ಸೆಕ್ಷನ್–5(1) | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ, ಸೆಕ್ಷನ್–5(2) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು ಸೆಕ್ಷನ್–19(1) |
|---|---|---|---|---|
| 1. | ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ, ಹಾವೇರಿ. | ಶ್ರೀ ಎಂ.ಟಿ.ಮಂಜುನಾಥ ಸ.ಇಂ–1 ಪಂ.ರಾ.ಇಂ. ವಿಭಾಗ, ಹಾವೇರಿ. | ಶ್ರೀ ಬಿ.ಎಂ.ಕೃಷ್ಣಪ್ಪ ಲೆ.ಪ ಪಂ.ರಾ.ಇಂ. ವಿಭಾಗ, ಹಾವೇರಿ. | ಶ್ರೀ ಜಿ.ಬಿ.ಕಾಮಟೆ ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ, ಹಾವೇರಿ. |

**ಕೈಪಿಡಿ–15**

ಇತರೆ ವಿವರಗಳು

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮಗಳಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಜಿ.ಬಿ. ಕಾಮಟೆ**

ಪಿ.ಆರ್.1059

ಕಾರ್ಯನಿರ್ವಾಹಕ ಇಂಜಿನೀಯರ್,

ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ.

**URBAN DEVELOPMENT DEPARTMENT**

**NOTIFICATION**

**No.UDD/247/MNX/2009, Bangalore, Dated:8th October, 2009**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette Dated:26.05.1988, 02.06.1988 & 09.06.1988 in Part-III at pages from 190 to 199, 203 to 212, 213 to 222 respectively vide Notification No.BDA/SALAO/A6/PR/229/87-88, Dated:23.03.1988 and Final Notification No.HUD 292 MNX 1993 dated:19-10-1994 was published in the Karnataka Gazette Dated:19.10.1994 under sub-section(1) of Section-19 of BDA Act 1976 (Karnataka Act-12 of 1976) for formation of layout Called "JAYAPRAKASH NARAYANA NAGAR VIIITH STAGE LAYOUT''.

**SCHEDULE**

**DISTRICT:BANGALORE** **TALUK: BANGALORE SOUTH** **HOBLI:UTTARAHALLI** **VILLAGE:KOTHANUR**

| Sl. No. | Name of the Khatedar/Anubhavadar Sri/Smt. | Sy.No. | Dry/Wet/ Garden | Total Extent | Kharab | Remaining Extent | Assesment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | Kanda, Hanumantha | 36/7 | Dry | 1-30 | - | 1-30 | 2-40 | 1-30 | **0-20** | 34 | 30 | 30/8 | 36/6 |
| **Total Extent withdrawn** | | | | | | | | | **0-20** | | | | |

**TOTAL EXTENT WITH DRAWN 20 Guntas (Twenty guntas Only)**

By Order and in the name of the Governer of Karnataka,

PR-1004

**M.S. PREMACHANDRA**

Under Secretary to Government,

Urban Development Department.

**URBAN DEVELOPMENT DEPARTMENT**

**NOTIFICATION**

**No.UDD/177/MNX/2009, Bangalore, Dated:24th October, 2009**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette dated:24-01-2002 and 23-05-2002 in Part-III at pages from 225 to 272 and 984 to 1035 vide Notification No.BDA/COMMR/DC(LA)/ALAO/10/2001-02 dated:14-12-2001 and No.BDA/COMMR/DC(LA)/ALAO/09/2002-2003, dated.15-4-2002 respectively. Final Notification No.UDD 654 MNX 2002 dated:31-10-2002 was published in the Karnataka Gazette dated:31-10-2002 in Part-III under Sub-section(1) of Section-19 of BDA Act-1976 (Karnataka Act-12 of 1976) for formation of layout Called "SIR M.VISVESWARAYANAGAR LAYOUT''.

**SCHEDULE**

**DISTRICT:BANGALORE TALUK: BANGALORE SOUTH HOBLI:KENGERI VILLAGE:SONNENAHALLY**

| Sl. No. | Name of the Khatedar/Anubhavadar Sri/Smt. | Sy. No. | Dry/ Wet/ Garden | Total Extent | Kharab | Remain ing Extent | Assess ment | Extent Acquir ed | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1. | M.Anjanappa, M.Shankarappa, G.Mukshi Bin late Devadhan | 26/3 | Dry | 7-04 | 0-24 | 6-16 | 6-72 | 7-04 | **1-22** | 1 | 26/2 | Hullala bound-ary | 27 |
| | **Total** | | | | | | | | **1-22** | | | | |

**TOTAL EXTENT WITH DRAWN 01 Acre and 22 GUNTAS (One Acre and Twenty Two Guntas Only)**

By Order and in the name of the Governer of Karnataka,

**M.S. PREMACHANDRA**

Under Secretary to Government,

Urban Development Department.

PR-1070

**URBAN DEVELOPMENT DEPARTMENT**

**NOTIFICATION**

**No.UDD/141/MNJ/2006, Bangalore, Dated:14th October, 2009**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Mysore Gazette:26-11-1959 in Part-III(a) at pages 41 to 51 vide Notification No.RDH 54 LTB 1959, dated:28-01-1960 and Final Notification No.RD 3 LTB 1965, dated:28-09-1965 was published in the Mysore Gazette dated:07-10-1965 in Part-III-I under Section-27 of City Improvement Trust Board, Bangalore Improvement Act 1945, (Mysore Act-17 of 1961) for formation of layout Called "KORAMANGALA LAYOUT''. The lands denotified are subject to the withdrawal of the cases pending in the Court.

**SCHEDULE**

**DISTRICT**:**BANGALORE** **TALUK**: **BANGALORE-SOUTH** **HOBLI**:**BEGUR** **VILLAGE**:**JAKKASANDRA**

| Sl. No. | Name of the Khatedar/Anubhavadar Sri/Smt. | Sy. No. | Dry/ Wet/ Garden | Total Extent | Kharab | Remaining Extent | Assess ment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G-Y | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | Hanumaiah bin Muniguruppa | 26/1 | Dry/ Garden | 5-03 | 0-04 | 4-27 0-12 | 7-7-0 | 5-03 | **3-14-14** | 24 | 24 | 25 | 26 |
| 2. | | | | | | | | | | | | | |
| 3. | Hanumaiah bin Ramaiah, Mahasweriga bin Muniya, Hanumakka wife of Ramaiah | 32/4 | Dry | 0-11 | 0-01 | 0-10 | 0-4-0 | 0-11 | **00-04** | Gram-atana tank | 34 | 23 | 33 |
| 4. | Hanumaiah bin Ramaiah, Abbadiga bin Munihanumaiah | 32/5 | Dry | 0-21 | 0-01 | 0-20 | 0-8-0 | 00-21 | **0-4-107** | Gram-atana tank | 34 | 23 | 33 |
| 5. | Hanumaiah bin Ramaiah, Abbadiga bin Munihanumaiah | 32/6 | Garden/ Dry | 2-35 | Nil | 1-02 1-03 | 8-0-0 | 2-35 | **0-5-95** | Gram-atana tank | 34 | 23 | 33 |
| 6. | Hanumaiah bin Ramaiah, Vasanthappa bin Muniga | 32/7 | Gardern/ Dry | 0-28 | Nil | 0-28 | 0-12-0 | 0-28 | **0-14** | Gram-atana tank | 34 | 23 | 33 |

| Sl. No. | Name of the Khatedar/Anubhavadar Sri/Smt. | Sy. No. | Dry/ Wet/ Garden | Total Extent | Kharab | Remaining Extent | Assess ment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G-Y | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 7. | Hanumaiah bin Ramaiah, Hanumakka bin Ramaiah | 32/8 | Gardern/ Dry | 0-28 | Nil | 0-12 | 0-14-0 | 0-12 | **00-12** | Gram-atana tank | 34 | 23 | 33 |
| 8. | Hanumaiah bin Ramaiah, Dodda Gundlodu bin Challaga | 32/9 | Garden/ Dry | 0-08 | Nil | 0-08 | 0-4-0 | 0-08 | **0-08** | Gram-atana tank | 34 | 23 | 33 |
| 9. | Hanumaiah bin Ramaiah, Kadrappa bin Nallappa | 32/10 | Garden/ Dry | 0-08 | Nil | 0-08 | 0-4-0 | -08 | **0-08** | Gram-atana tank | 34 | 23 | 33 |
| 10. | Hanumaiah bin Ramaiah, Kodariga bin Challaga, Hanumakka wife of Ramaiah | 32/11 | Dry | 0-19 | - | 0-19 | 0-8-0 | 0-19 | **0-19** | Gram-atana tank | 34 | 23 | 33 |
| 11. | Hanumaiah bin Ramaiah, Munimaddura bin kaiga Chikkappaiah, son of Nanjappa | 32/12 | Dry | 0-38 | - | 0-38 | 1-0-0 | 0-38 | **0-16-15** | Gram-atana tank | 34 | 23 | 33 |
| 12. | Hanumaiah bin Ramaiah, Bagepally Pillapa bin Gurappan | 32/17 | Dry | 0-20 | - | 0-20 | 0-8-0 | 0-20 | **0-20** | Gram-atana tank | 34 | 23 | 33 |
| 13. | Hanumaiah bin Ramaiah, Papamma kom Munipappaiah | 33/11 | Dry | | 1-37 | - | 1-37 | 2-4-0 | **0-7-67** | 23, 24 | 34, 35 | 32 | 30 |

**TOTAL EXTENT WITH DRAWN 6 Acres and 11Guntas and 298 Yards (Six Acres and Eleven Guntas and Two Hundred ninty Eight Yards Only)**

By Order and in the name of the Governer of Karnataka,

**M.S. PREMACHANDRA**

Under Secretary to Government,

Urban Development Department.

PR-1071

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಿಧಿ 28(4)ರ ಅಧಿಸೂಚನೆ

### ಸಂಖ್ಯೆ: ಸಿಐ 76 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ:6ನೇ ನವೆಂಬರ್, 2009

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ:18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ:12.03.2007ರ ಅಧಿಸೂಚನೆ, ಕರ್ನಾಟಕ ವಿಶೇಷ ರಾಜ್ಯಪತ್ರ ಭಾಗ-3ರ ವಿಶೇಷ ಪತ್ರಿಕೆ ಪುಟ ಸಂಖ್ಯೆ 6 ರಿಂದ 9ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 500 ಎಸ್.ಪಿ.ಕ್ಯೂ 2006 ದಿನಾಂಕ:09.03.2007ರ ಭೂಸ್ವಾಧೀನಕ್ಕೆ ಒಳಪಟ್ಟ ಪ್ರದೇಶದ ಪ್ರಕಾರ ಸರ್ಕಾರ ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಕೈಗಾರಿಕಾ ಉದ್ದೇಶದ ಸಲುವಾಗಿ ಮೆ॥ ಮಾನ್ಯತಾ ಪ್ರಮೋಟರ್ಸ್ ಪ್ರೈಲಿಮಿಟೆಡ್ ರವರಿಗೆ ಭೂಸ್ವಾಧೀನಪಡಿಸಿಕೊಳ್ಳಲು ಇಚ್ಛಿಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಪ್ರಕಟಿಸಲಾಗಿರುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ ಈಗ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4)ರ (1966ರ ಕರ್ನಾಟಕ ಕಾಯ್ದೆ ಸಂಖ್ಯೆ: 18)ರ ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಿರುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ಘೋಷಿಸಲಾಗಿದೆ.

ಗ್ರಾಮ: ನಾಗವಾರ ಹೋಬಳಿ: ಕಸಬಾ ತಾಲ್ಲೂಕು: ಬೆಂಗಳೂರು ಉತ್ತರ ಜಿಲ್ಲೆ: ಬೆಂಗಳೂರು

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಪಡಿಸಿಕೊಳ್ಳಬೇಕಾದ ವಿಸ್ತೀರ್ಣ | | | ತರಹೆ | ಆಕಾರ (ರೂ) | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ-ಗು | ಖರಾಬು ಎ-ಗು | ಬಾಕಿ ಎ-ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 103/1 | 0-05 | - | 0-05 | ತರಿ | 0-25 | 103/5 | 102 | 104 | 103/2 |
| 2. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 103/2 | 0-05 | - | 0-05 | ತರಿ | 0-25 | 103/5 | 102 | 103/1 | 103/3 |
| 3. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 104/1 | 0-12 | 0-01 | 0-11 | ತರಿ | 0-36 | 108 | 101 | 101 | 104/2 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಪಡಿಸಿಕೊಳ್ಳಬೇಕಾದ ವಿಸ್ತೀರ್ಣ | | | ತರಹೆ | ಆಕಾರ (ರೂ) | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 4. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 104/2 | 0–06 | 0–01 | 0–05 | ತರಿ | 0–17 | 108 | 101 | 104/1 | 104/3 |
| 5. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 104/3 | 0–07 | 0–01 | 0–06 | ತರಿ | 0–19 | 108 | 101 | 104/3 | 105 |
| 6. | ತೇಜ್‌ರಾಜ್ ಗುಲೇಚಾ ಬಿನ್ ಮುಕ್‌ರಾಜ್ | --- | 104/4 | 0–13 | 0–01 | 0–12 | ತರಿ | 0–38 | 108 | 101 | 104/3 | 105 |
| 7. | ಬಿ.ವಿ. ಸತ್ಯನಾರಾಯಣ (ಜಿ.ಪಿ.ಎ.ದಾರರು) ಕ್ರಯದಾರರು:– ವಿ.ಎಸ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ಪಿ. ಸೂರ್ಯನಾರಾಯಣಶೆಟ್ಟಿ, ಹೇಮಲತಾ ಅಗರವಾಲ್ ಬಿನ್ ಸಿತಾರಾಮಜಿ ಅಗರವಾಲ್, ಬಿ.ವಿ. ಸತ್ಯನಾರಾಯಣ ಬಿನ್ ಲೇಟ್ ವಿ.ವೆಂಕಟಕೃಷ್ಣಯ್ಯ | --- | 107 | 1–04 | – | 1–04 | ತರಿ | – | 110 | 108 | 109 | 105 |
| 8. | ಆರ್. ಸುಗುಣ ಕೋಂ ರೆಡ್ಡಿ ವೀರಣ್ಣ | --- | 108 | 2–14 | – | 2–14 | ತರಿ | 4–94 | 107 | 104 | 109 | 105 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಪಡಿಸಿಕೊಳ್ಳಬೇಕಾದ ವಿಸ್ತೀರ್ಣ | | | ತರಹೆ | ಆಕಾರ (ರೂ) | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 9. | ಬೀರಪ್ಪ ಬಿನ್ ಮುನಿವೆಂಕಪಣ್ಣ | --- | 109 | 1–04 | – | 1–04 | ತರಿ | 2–31 | 99 | 100 | 100 | 108, 107 |
| 10. | ಪಾರ್ವತಮ್ಮ ಕೋಂ ಹೆಚ್.ಕೃಷ್ಣಪ್ಪ ಡಾ॥ ರಾಮವೆಂಕಟಸ್ವಾಮಿರೆಡ್ಡಿ ಬಿನ್ ರಾಮರೆಡ್ಡಿ, ವಿಜಯ ಕೋಂ ಕೆ.ವಿ. ಕುಮಾರ್, ಡಾ॥ ರಾಜೀವ್‌ಚಂದ್ರ ಬಿನ್ ಜಗದೀಶ್ ಚಂದ್ರ | ಹೆಚ್. ಕೃಷ್ಣಪ್ಪ ವಿಜಯಕುಮಾರಿ, ಡಾ: ರಾಮ್ ವೆಂಕಟಸ್ವಾಮಿರೆಡ್ಡಿ, ಡಾ: ರಾಜೇಂದ್ರ | 100/1 | 1–29 | – | 1–29 | ತರಿ | 3–82 | 100/2 | 96 | 99 | 109 |
| | **ಒಟ್ಟು** | | | **7–19** | **0–04** | **7–15** | | | | | | |

ಗ್ರಾಮ: ಥಣಿಸಂದ್ರ ಹೋಬಳಿ: ಕೆ.ಆರ್.ಪುರಂ ತಾಲ್ಲೂಕು: ಬೆಂಗಳೂರು ಪೂರ್ವ ಜಿಲ್ಲೆ: ಬೆಂಗಳೂರು

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಪಡಿಸಿಕೊಳ್ಳಬೇಕಾದ | | | ತರಹೆ | ಆಕಾರ (ರೂ) | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 1. | ಚಿನ್ನವೆಂಕಟಸುಬ್ಬರೆಡ್ಡಿ ಬಿನ್ ಸುಬ್ಬಾರೆಡ್ಡಿ, ವೆಂಕಟರೆಡ್ಡಿ ಬಿನ್ ಸುಬ್ಬಾರೆಡ್ಡಿ | ಚಿನ್ನವೆಂಕಟಸುಬ್ಬರೆಡ್ಡಿ ಬಿನ್ ಸುಬ್ಬಾರೆಡ್ಡಿ, ವೆಂಕಟರೆಡ್ಡಿ | 57/1 | 1–11 | – | 0–29 0–22 | ತರಿ ಭಾಗಾಯ್ತು | 2–60 | 56 | 57/2 | 59 | ಹಳ್ಳ |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಪಡಿಸಿಕೊಳ್ಳಬೇಕಾದ | | | ತರಹೆ | ಆಕಾರ (ರೂ) | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 2. | ಮುರಳೀಧರ್ ಬಿನ್ ಸುಬ್ಬಣ್ಣ, ಇದ್ಲೂರು ರಂಗಾರೆಡ್ಡಿ ಬಿನ್ ನಾರಾಯಣರೆಡ್ಡಿ ಭೂ ಪರಿವರ್ತನೆ | ಶೇಷಮ್ಮ, ಮುರಳೀಧರ್, ಇದ್ಲೂರು ರಂಗಾರೆಡ್ಡಿ | 57/2 | 2–22 | 0–01 | 1–14<br>1–07 | ತರಿ ಭಾಗಾಯ್ತು | – | 57/1 | ರಾಚೇನ ಹಳ್ಳಿ ಗಡಿ | ರಾಚೇನ ಹಳ್ಳಿ ಗಡಿ | ಹಳ್ಳ |
| 3. | ರಾಮಯ್ಯ ಬಿನ್ ಮುನಿಶಾಮಪ್ಪ, ಗೋಪಾಲಪ್ಪ ಬಿನ್ ಮುನಿಶಾಮಪ್ಪ, ಭೂ ಪರಿವರ್ತನೆ | ರಾಮಯ್ಯ, ಗೋಪಾಲಪ್ಪ | 58/1ರ ಪೈಕಿ | 0–32 | 0–01 | 0–31 | ಖುಷ್ಕಿ ಭಾಗಾಯ್ತು | 3–82 | 58/1ರ ಉಳಿಕೆ ಜಮೀನು | ರಾಚೇನ ಹಳ್ಳಿ ಗಡಿ | 59/1 | 56 |
| 4. | ರಾಮಯ್ಯ ಬಿನ್ ಮುನಿಶಾಮಪ್ಪ, ಗೋಪಾಲಪ್ಪ ಬಿನ್ ಮುನಿಶಾಮಪ್ಪ | ರಾಮಯ್ಯ, ಗೋಪಾಲಪ್ಪ | 59/1ರ ಪೈಕಿ | 0–39 | 0–04 | 0–35 | ಖುಷ್ಕಿ | 1–34 | 58/2ರ ಉಳಿಕೆ ಜಮೀನು | 59/1ರ ಉಳಿಕೆ | 61 | 58/1 |
| | ಒಟ್ಟು | | | **5–24** | **0–06** | **5–18** | | | | | | |

**ಘೋಷ್ವಾರೆ**

| ಕ್ರ. ಸಂ. | ಗ್ರಾಮದ ಹೆಸರು | ವಿಸ್ತೀರ್ಣ | | |
|---|---|---|---|---|
| | | ಐನು ಎ–ಗುಂ. | ಖರಾಬು ಎ–ಗುಂ. | ಬಾಕಿ ಎ–ಗುಂ. |
| 1. | ನಾಗವಾರ | 7–19 | 0–04 | 7–15 |
| 2. | ಥಣಿಸಂದ್ರ | 5–24 | 0–06 | 5–18 |
| | **ಒಟ್ಟು** | **13–03** | **0–10** | **12–33** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಪಿ.ಆರ್.1131

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.